


# ಸಪ್ತಗಿರಿ



ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

**ಬಿಡಿ ಪ್ರತಿ ೫೦ ಪೈಸೆ.**

ಸಂಪುಟ 12]　　ಸೆಪ್ಟೆಂಬರ್ 1981　　[ಸಂಚಿಕೆ 4

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ
ಮೇನೇಜರ್, ತಿ. ತಿ. ದೇ. ಪ್ರೆಸ್, ತಿರುಪತಿ.

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ-ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ

## ವಿಷಯಸೂಚಿ

# ಓದುಗರೊಡನೆ ಒಂದು ನಿಮಿಷ

ಸಪ್ತಗಿರಿ ಪತ್ರಿಕೆಯನ್ನು ಪ್ರತಿ ತಿಂಗಳೂ ಕೊಂಡು ಓದುತ್ತಿರುವ ನಿಮಗೆ, ಇನ್ನಿತರ ಪತ್ರಿಕೆಗಳ ಬೆಲೆ ಏರಿದಾಗೆಲ್ಲ ಶ್ರೀ ವೆಂಕಟೇಶ್ವರನ ಕೃಪಾಪೋಷಿತವಾದ ಈ ಪತ್ರಿಕೆಯ ಬೆಲೆ ಸ್ಥಿರವಾಗಿಯೇ ಉಳಿದು, ಅತಿ ಕಡಮೆ ಕ್ರಯಕ್ಕೆ ದೊರೆಯುತ್ತ ನಡೆದದ್ದು ಕಳೆದ ಹತ್ತು ವರ್ಷಗಳಿಂದ ಅನುಭವವೇದ್ಯವೇ ಆಗಿದೆ. ವಸ್ತು ಸ್ಥಿತಿಯೆಂದರೆ ಸಪ್ತಗಿರಿಯ ಉತ್ಪಾದನಾ ವೆಚ್ಚ ಮೂರು ರೂ.ಗಳಾಗಿದ್ದು ಎರಡೂವರೆ ರೂಗಳನ್ನು ತಿ. ತಿ. ದೇ. ಪ್ರತಿ ಪ್ರತಿಗೂ ಸಹಾಯಧನ ರೂಪದಲ್ಲಿ ನೀಡುತ್ತಿದ್ದುದರಿಂದ ಓದುಗರು ಐವತ್ತು ಪೈಸೆಗೇ ಪತ್ರಿಕೆಯನ್ನು ಪಡೆಯಲು ಸಾಧ್ಯವಾಗುತ್ತಿತ್ತು.

ಇದೀಗ ಸಪ್ತಗಿರಿ ಪತ್ರಿಕೆಯನ್ನು ಸ್ವಾವಲಂಬಗೊಳಿಸಿ ತನ್ಮೂಲಕವಾಗಿ ಉಳಿಯುವ ನಿವ್ವಳ ಸಹಾಯ ಧನವನ್ನು ಹೆಚ್ಚು ಜನೋಪಯೋಗಿ, ಧರ್ಮೋಪಯೋಗಿ ಕಾರ್ಯಕ್ರಮಗಳಲ್ಲಿ ತೊಡಗಿಸಲು ಅನುಕೂಲಮಾಡಿಕೊಡಬೇಕೆಂದು ಯೋಚಿಸಿ ಅಕ್ಟೋಬರ್ ತಿಂಗಳಿನಿಂದ ಸಪ್ತಗಿರಿಯ ಬಿಡಿಪ್ರತಿಯ ಬೆಲೆಯನ್ನು 50 ಪೈಸೆಯಿಂದ ಒಂದು ರೂಪಾಯಿಗೆ ಏರಿಸಲು ನಿರ್ಧರಿಸಲಾಗಿದೆ. ಹೀಗಿದ್ದರೂ ಓದುಗರು ಎರಡು ರೂಪಾಯಿನ ಸೋಡಿಯನ್ನು ಪಡೆಯುವರು.

ಓದುಗರು ಹೆಚ್ಚು ಧರ್ಮಾಭಿಮಾನದಿಂದ ಸಪ್ತಗಿರಿಯನ್ನು ಆದರಿಸಿ ಎಂದಿನಂತೆ ಪ್ರೋತ್ಸಾಹಿಸುವರೆಂದು ನಂಬಲಾಗಿದೆ.

**ಸಂಪಾದಕ,**
ಸಪ್ತಗಿರಿ.

# ಸಪ್ತಗಿರಿ ಯನ್ನು ಬೆಳೆಸಿರಿ

ಸನಾತನ ಧರ್ಮವನ್ನು ಹರಡಲು ಪರಿಶ್ರಮಿಸುತ್ತಿರುವ ಸಪ್ತಗಿರಿ ಮಾಸ ಪತ್ರಿಕೆ ಓದುಗರ ಸಂಪೂರ್ಣ ಸಹಕಾರದ ಅಗತ್ಯ ಹೊಂದಿದೆ. ನೀವು ಈ ಪತ್ರಿಕೆಯನ್ನು ನಿಮ್ಮ ಬಂಧುಗಳಿಗೆ, ಮಿತ್ರರಿಗೆ ನಿಮ್ಮ ಕಾಣಿಕೆಯಾಗಿ ನೀಡಬಹುದು. ಒಂದು ವರ್ಷದ ಚಂದಾ ಹಣವನ್ನು ನಮಗೆ ಕಳುಹಿಸಿ. ನಿಮ್ಮ ಪರವಾಗಿ ನೀವು ಹೆಸರಿಸುವವರಿಗೆ ಒಂದು ವರ್ಷ ಸಪ್ತಗಿರಿಯನ್ನು ಕಳುಹಿಸಲಾಗುತ್ತದೆ. ಕೆಳಗಣ ಕೂಪನ್ ಅನ್ನು ತುಂಬಿ ಹನ್ನೆರಡು ರೂಗಳ ಎಂ. ಓ. ಡಿ. ಡಿ. ಅನ್ನು ಕಳುಹಿಸಿರಿ.

ಮಾನ್ಯರೆ :

ಸಪ್ತಗಿರಿಯನ್ನು ಒಂದು ವರ್ಷ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿರಿ. ಹನ್ನೆರಡು ರೂಗಳ ಎಂ. ಓ/ ಡಿ. ಡಿ. ಕಳುಹಿಸಿದ್ದೇನೆ.

ಸಹಿ.

( ಬಿಡಿಬಿಡಿಯಾದ ದಪ್ಪ ಅಕ್ಷರದಲ್ಲಿ ಬರೆಯಿರಿ )

ಹೆಸರು ...........................................

ವಿಳಾಸ ...........................................

**ವೆಲ್‌ಫೇರ್ ಆಫೀಸರ್**
ಸೇಲ್ಸ್ ವಿಂಗ್
ತಿ. ತಿ. ದೇ. ಪ್ರೆಸ್ ಕಾಂಪೌಂಡ್
ತಿರುಪತಿ. –ಇವರಿಗೆ.

## ಸಪ್ತಗಿರಿ

## ಜಾಹೀರಾತು ದರಗಳು

| | |
|---|---|
| ಪೂರ್ತಿ ಪುಟ | ರೂ 500–00 |
| ಅರ್ಧಪುಟ | ರೂ 300–00 |
| ಕಾಲು ಪುಟ | ರೂ 150–00 |
| ಒಂದು ಕಾಲಂ | ರೂ 200–00 |

ಕೂಡಲೇ ಬರೆಯಿರಿ.

**ಸಂಪಾದಕರು, ಸಪ್ತಗಿರಿ**
ತಿರುಪತಿ.

# ಶ್ರೀ ಗಣೇಶ ಚತುರ್ಥಿ

ಜಾತಿ ಮತ ಪ್ರಾಂತಗಳ ಭೇದಗಳಿಲ್ಲದೆ ಹಿಂದುಗಳೆಲ್ಲರೂ ಸೇವಿಸುವ ದೈವಗಳಲ್ಲಿ ವಿನಾಯಕ ಪ್ರಧಾನನಾದವನು. ವಿನಾಯಕನಿಗೆ ಇರುವ ವಿಶಿಷ್ಟಸ್ಥಾನ ಇತರ ದೇವತೆಗಳಿಗೆ ಇಲ್ಲ. ವ್ರತವಾಗಲಿ, ಪುಣ್ಯಕಾರ್ಯವಾಗಲಿ ಎಲ್ಲ ಪೂಜೆಗಳಲ್ಲಿ ಅಗ್ರತಾಂಬೂಲ ಹೊಂದುವವನು ವಿನಾಯಕನೊಬ್ಬನೇ. ವಿನಾಯಕನನ್ನು ಕುರಿತು ವೇದಪುರಾಣೇತಿಹಾಸಗಳಲ್ಲಿ ಅನೇಕ ಕಥೆಗಳು ಬಗೆಬಗೆಯಾಗಿ ಕಾಣುತ್ತವೆ.

ವಿನಾಯಕನನ್ನು ಕುರಿತು ಪ್ರಸ್ತಾಪಿಸುವ ಗ್ರಂಥಗಳಲ್ಲಿ ಸ್ಕಾಂದಪುರಾಣ ನಾಗರಖಂಡ, ಕೌಮಾರಿಕಾಖಂಡಗಳು, ಶಂಕರ ಸಂಹಿತೆಯಲ್ಲಿ ಉಪದೇಶಕಾಂಡ, ಬ್ರಹ್ಮವೈವರ್ತ ಪುರಾಣದಲ್ಲಿ ಗಣಪತಿ ಖಂಡ, ಶಿವಪುರಾಣ, ಲಿಂಗಪುರಾಣ, ಗಣೇಶ ಪುರಾಣ, ಗಣೇಶಭಾಗವತಗಳು ಪ್ರಸಿದ್ಧವಾದವು. ಈ ಪುರಾಣಗಳಲ್ಲಿರುವ ಕಥೆಗಳನ್ನು ವಿಷಯಪ್ರಧಾನವಾಗಿ ನೋಡಬಹುದು.



ವಿನಾಯಕನ ಹುಟ್ಟಿಗೆ ಕಾರಣ ಯಾರೆನ್ನುವುದು ಮೊದಲನೆಯ ಪ್ರಶ್ನೆ. ಸ್ಕಾಂದ ಪುರಾಣ, ನಾಗರಖಂಡ ಶಿವಪುರಾಣಗಳ ಕಥೆಗಳ ಪ್ರಕಾರ ವಿನಾಯಕನ ಹುಟ್ಟಿಗೆ ಪಾರ್ವತಿ ಕಾರಣಳಾಗುತ್ತಾಳೆ. ಸ್ಕಾಂದ ಪುರಾಣ, ಕೌಮಾರಿಕಾಖಂಡದ ಪ್ರಕಾರ ಪರಮೇಶ್ವರನು ಕಾರಕನಾಗುತ್ತಾನೆ. ಬ್ರಹ್ಮವೈವರ್ತ ಪುರಾಣದ ಪ್ರಕಾರ ಕೃಷ್ಣನು ಕಾರಕನು. ಲಲಿತಾ ಸಹಸ್ರನಾಮದ ಪ್ರಕಾರ ಶ್ರೀದೇವಿ ಮಹಾಗಣಪತಿಸೃಷ್ಟಿಗೆ ಕಾರಣಳಾಗುತ್ತಾಳೆ. ಇಷ್ಟು ಕಥೆಗಳಿದ್ದರೂ ಪಾರ್ವತಿ ವಿನಾಯಕನ ಸೃಷ್ಟಿಗೆ ಕಾರಣಳಾದಳೆನ್ನುವ ಕಥೆಗೆ ಪ್ರಚಾರ ಜಾಸ್ತಿ.

ವಿನಾಯಕನು ಗಜಮುಖನಾಗುವುದಕ್ಕೆ ಕಾರಣವನ್ನು ಹುಡುಕುವುದು ಎರಡನೇ ಪ್ರಶ್ನೆ. ಗಣಪತಿ ಸಹಜವಾಗಿ ಗಜಮುಖನಾಗಿ ಹುಟ್ಟಿದನೆಂದು ಸ್ಕಾಂದ, ಲಿಂಗ, ವಾಮನ, ಪದ್ಮ, ಶಿವ, ಪುರಾಣಗಳು ಹೇಳುತ್ತವೆ. ಆನೆ ರೂಪಗಳೆತ್ತಿದ ಪಾರ್ವತೀ ಪರಮೇಶ್ವರರು ರತಿಕ್ರೀಡೆ ಮಾಡಿದ ಫಲವಾಗಿ ಮಗು ಗಜಮುಖನಾಗಿ ಹುಟ್ಟಿತೆಂದು ಮತ್ತೊಂದು ಕಥೆ ಇದೆ. ಆದರೆ ಶಾಪದಿಂದ ವಿನಾಯಕನಿಗೆ ತಲೆ ಹೋಯಿತೆಂದು ಹಲವರು ಹೇಳುತ್ತಾರೆ. ಶಾಪ ಕೊಟ್ಟವರು ಯಾರು? ಪಾರ್ವತಿ ತನ್ನ ಮಗುವನ್ನು ಪ್ರೀತಿಯಿಂದ ನೋಡುತ್ತಾ ಇದ್ದಳಂತೆ. ಪರಮೇಶ್ವರನಿಗೆ ಕೋಪ ಬಂದು 'ನೀನು ಲಂಬೋದರನಾಗು, ಗಜಮುಖನಾಗು' ಎಂದು ಶಪಿಸಿದನಂತೆ. ಎಲ್ಲರೂ ವಿನಾಯಕನಿಗೆ ನಮಸ್ಕಾರ ಮಾಡುತ್ತಾ ಇದ್ದ ಸಮಯದಲ್ಲಿ ಶನಿ ಉದಾಸೀನನಾಗಿ ಇದ್ದನಂತೆ. ಕಾರಣ ಕೇಳಿದಲ್ಲಿ 'ತನ್ನ ಕಟಾಕ್ಷ ಬಿದ್ದರೆ ಅಶುಭವಾಗುತ್ತದೆ'ಂದು ಶನಿ ಹೇಳಿದನು. ಆದರೆ ಆ ಸಮಾಧಾನ ದೇವತೆಗಳಿಗೆ ತೃಪ್ತಿ ಕೊಡಲಿಲ್ಲ. ಶನಿ ವಿನಾಯಕನನ್ನು ನೋಡಿದ; ತಲೆಹೋಯಿತು. ಕಶ್ಯಪ ಪ್ರಜಾಪತಿಯ ಮಗನು ಸೂರ್ಯನು. ಶಿವನು ಒಮ್ಮೆ ಸೂರ್ಯನನ್ನು ಬಾಧಿಸಿದನಂತೆ. ಕಶ್ಯಪನಿಗೆ ಸಿಟ್ಟು ಬಂದಿತು. 'ನಿನ್ನ ಮಗನ ತಲೆ ಭಗ್ನವಾಗಲಿ' ಎಂದು ಶಾಪ ನೀಡಿದನು.

ಆ ಆನೆ ತಲೆ ಯಾರದು ಎನ್ನುವುದು ಕುತೂಹಲಕಾರಿ ಪ್ರಶ್ನೆ. ಉತ್ತರ ದಿಕ್ಕಾಗಿ ಮಲಗಿದ್ದ ಸಾಮಾನ್ಯ ಗಜ ಎಂದು ಒಂದು ಕಥೆ. ಪುಷ್ಪಭದ್ರಾ ತೀರದಲ್ಲಿ ರತ್ಯಾಯಾಸದಿಂದ ಮಲಗಿದ್ದ ಶ್ರೇಷ್ಠವಾದ ಆನೆ ಎಂದು ಮತ್ತೊಂದು ವಿವರಣೆ ಇದೆ. ಆ ಆನೆಯ ತಲೆ 'ಐರಾವತದ ತಲೆ' ಎಂದು ಶಿವಪುರಾಣ ಹೇಳುತ್ತದೆ. ಗಜಾಸುರನ ತಲೆಯನ್ನು ವಿನಾಯಕನಿಗೆ ಇಟ್ಟರೆಂದು ಸ್ಕಾಂದಪುರಾಣ ಹೇಳುತ್ತದೆ.

ಗಜಕ್ಕೆ ಎರಡು ದಂತಗಳು ಇರಬೇಕಲ್ಲ? ವಿನಾಯಕನಿಗೆ 'ಏಕದಂತ' ಎಂಬ ನಾಮ ಉಂಟು. ಒಂದು ರಂತ ಏನಾಯಿತೆನ್ನುವುದು ಸಹಜವಾಗಿ ಉತ್ಪನ್ನವಾಗುವ ಪ್ರಶ್ನೆ. ವಿನಾಯಕನಿಗೆ ಎರಡು ದಂತಗಳು ಇದ್ದವು. ಕೈಲಾಸದಲ್ಲಿ ಒಂದು ಸಲ ಪರಶುರಾಮನಿಗೂ ವಿನಾಯಕನಿಗೂ ಮಾತು ಮಾತು ಬೆಳೆದು ಪರಶುರಾಮನು ಕೋಪದಿಂದ ಪರಶುವನ್ನು ಪ್ರಯೋಗಿಸಿದ. ಆ

ಡಾ॥ ಕೆ. ಸರ್ವೋತ್ತಮನ್.

ಪರಶುವನ್ನು ಕೊಟ್ಟವನು ಪರಮೇಶ್ವರನೇ. ಆದ್ದರಿಂದ ವಿನಾಯಕನು ಸುಮುಖನಿದ್ದ. ಆ ಪರಶು ಒಂದು ದಂತವನ್ನು ಭಗ್ನಮಾಡಿತು. ವಿನಾಯಕನ ವಿಕೃತ ವೇಷವನ್ನು ನೋಡಿ ಚಂದ್ರನು ನಕ್ಕನಂತೆ. ವಿನಾಯಕನಿಗೆ ಸಿಟ್ಟುಬಂತು. ಒಂದು ದಂತವನ್ನು ಚಂದ್ರನ ಮೇಲೆ ಪ್ರಯೋಗಿಸಿದ. ಆದ್ದರಿಂದ 'ಏಕದಂತ'ನಾದ. ತಾನು ಬರೆಯುವ ಸಾಮುದ್ರಿಕಾ ಶಾಸ್ತ್ರ ರಚನೆಗೆ ವಿಘ್ನ ಮಾಡುತ್ತಾ ಇದ್ದದ್ದರಿಂದ ಷಣ್ಮುಖನು ಅಣ್ಣನ ದಂತವನ್ನು ಮುರಿದನಂತೆ.

ವಿನಾಯಕನ ವಾಹನ ಯಾವುದು? ಮೂಷಿಕ ವಿನಾಯಕನ ಸುಪ್ರಸಿದ್ಧ ವಾಹನ. ಆದರೆ ನವಿಲು, ಸರ್ಪ ಕೂಡ ವಿನಾಯಕನ ವಾಹನಗಳೇ. ಮತ್ಸ್ಯಾಸುರ ಸಂಹಾರದಲ್ಲಿ ಸಿಂಹ ವಾಹನ ವಿನಾಯಕನಿಗೆ. ಕಾಮಾಸುರ ಸಂಹಾರಕಾಲಕ್ಕೆ ನವಿಲು, ಮಮಾಸುರ ಸಂಹಾರ ಮಾಡಿದ ವೇಳೆ ಸರ್ಪ ವಾಹನವಾಯಿತು.

ಗಣಪತಿಗೆ 'ಸಿದ್ಧಿ, ಬುದ್ಧಿ' ಎನ್ನುವವರು ಪತ್ನಿಯರು. ಆದರೆ ಸಾರಸಂಗ್ರಹದ ಪ್ರಕಾರ ಒಂಬತ್ತು ಜನ ಪತ್ನಿಯರು. ತೀವ್ರಾ, ಜ್ವಾಲಿನಿ, ನಂದಾ, ಭೋಗದಾ, ಕಾಮರೂಪಿಣೀ, ತೇಜೋವತಿ, ಸತ್ಯಾ, ವಿಘ್ನನಾಶಿನಿ ಎಂಬುದು ಅವರ ಹೆಸರುಗಳು. ಸಿದ್ಧಿ ಕುಮಾರನು 'ಲಾಭ'. ಬುದ್ಧಿ ಕುಮಾರನು ಲಕ್ಷ್ಮೀ.

ವಿನಾಯಕವ್ರತ ಪ್ರಾಚೀನವಾದದ್ದು. ಈ ವ್ರತವನ್ನು ಕುರಿತು ಚಾಂದ್ರಮಾಸ ಶುದ್ಧ ಚೌತಿ ದಿನ ಈ ವ್ರತ ಮಾಡಬೇಕೆಂದು ಬೋಧಾಯನ ಗೃಹ್ಯಸೂತ್ರ ಹೇಳುತ್ತದೆ. ಶ್ರಾವಣಮಾಸದಲ್ಲಿ ಆಗಲಿ, ಮಾರ್ಗಶೀರ್ಷ ಮಾಸದಲ್ಲಿ ಆಗಲಿ ಈ ವ್ರತ ಮಾಡತಕ್ಕದ್ದು. ಆದರೆ ಕಾಲಕ್ರಮದಲ್ಲಿ 'ಭಾದ್ರಪದ ಶುದ್ಧ ಚೌತಿ' ದಿನದಲ್ಲಿ ಈ ವ್ರತ ಮಾಡುವುದು ಆಚಾರವಾಯಿತು. ಈ ವ್ರತವೇ ವಟಗಣೇಶವ್ರತ, ಅಂಗಾರಕ ಚತುರ್ಥೀವ್ರತ, ಸತ್ಯ ವಿನಾಯಕ ವ್ರತ, ಗೋಮಯ ಗಣವ್ರತವಾಗಿ ವಿವಿಧ ರೂಪಗಳನ್ನು ಹೊಂದಿದೆ. ಈ ವಿನಾಯಕ ವ್ರತ ಮಾಡುವ ಪದ್ಧತಿ ಎಲ್ಲಾ ಜನರಿಗೂ ತಿಳಿದ ವಿಷಯವೇ. ಆದ್ದರಿಂದ ಈ ವ್ರತದಲ್ಲಿರುವ ಆಧ್ಯಾತ್ಮ ರಹಸ್ಯಗಳನ್ನು ನೋಡೋಣ.

'ಗ' ಎಂದರೆ ಬುದ್ಧಿ, 'ಣ' ಎಂದರೆ ವಿದ್ಯಾ ವಿವೇಕಗಳು. ವಿದ್ಯಾಬುದ್ಧಿಗಳಿಗೆ ಅಧಿಪತಿ ವಿನಾಯಕನೆಂದು ವಿಶೇಷಾರ್ಥ. 'ಏಕದಂತ' ಎನ್ನುವುದು ಅದ್ವೈತತತ್ತ್ವಕ್ಕೆ ಪ್ರತೀಕ. ಸೊಂಡಿಲು ಓಂಕಾರವನ್ನು ಸೂಚಿಸುತ್ತದೆ. 'ಕಡುಬು' ಮುಕ್ತಿಯ ಅಪೇಕ್ಷೆಯನ್ನು ತಿಳಿಸುತ್ತದೆ. 'ಪಾಶ' ರಾಗವನ್ನು, ಅಂಕುಶ ತಾಳವನ್ನು, ಸರ್ಪ ಆಲಾಪನೆಯನ್ನು ವ್ಯಕ್ತಮಾಡುತ್ತದೆ. ಮೋಹವನ್ನು ಬಂಧಿಸುವನಾದ್ದರಿಂದ ಕೈಯಲ್ಲಿ ಪಾಶ. ವಿಶ್ವ ನಿಯಂತೃತ್ವಕ್ಕೆ ಲಾಂಛನ ಅಂಕುಶ, ಸುರ, ಅಸುರ, ನರ, ನಾಗ ಜಾತಿಗಳನ್ನು, ಚತುರ್ವೇದಗಳನ್ನು, ಚತುರ್ವಿಧ ಪುರುಷಾರ್ಥಗಳನ್ನು ಚತುರ್ವಿಧ ವರ್ಣದವರಿಗೂ ಕೊಡುವ ಸಮರ್ಥನಾದುದರಿಂದ ವಿನಾಯಕನು ಚತುರ್ಭುಜನಾದ.

ನಮಗೆ ಮೂರು ಶರೀರಗಳು. ಸ್ಥೂಲ ಶರೀರ, ಸೂಕ್ಷ್ಮಶರೀರ, ಕಾರಣಶರೀರ. ಶರೀರದಲ್ಲಿ ಸಪ್ತಧಾತುಗಳಿರುತ್ತವೆ. (7×3=21) ಆದ್ದರಿಂದ ನಾವು ಇಪ್ಪತ್ತೊಂದು ಪತ್ರೆಗಳಿಂದ ಪೂಜೆಮಾಡುತ್ತೇವೆ. ಆ ಪತ್ರೆಗಳು- ಮಾಚೀಪತ್ರೆ, ಬೃಹತೀಪತ್ರೆ, ಬಿಲ್ವಪತ್ರೆ, ದೂರ್ವಾಯುಗ್ಮ, ದತ್ತೂರ ಪತ್ರೆ, ಬದರೀಪತ್ರೆ, ಅಪಾಮಾರ್ಗಪತ್ರೆ, ತುಲಸೀ ಪತ್ರೆ, ಚೂತಪತ್ರೆ, ಕರವೀರ ಪತ್ರೆ, ವಿಷ್ಣುಕ್ರಾಂತಪತ್ರೆ, ದಾಡಿಮೀ ಪತ್ರೆ, ದೇವದಾರುಪತ್ರೆ, ಮರುವಕಪತ್ರೆ, ಸಿಂಧುವಾರಪತ್ರೆ, ಜಾಜೀಪತ್ರೆ, ಗಂಡಕೀ ಪತ್ರೆ, ಶಮೀಪತ್ರೆ, ಅಶ್ವತ್ಥಪತ್ರೆ, ಅರ್ಜುನ ಪತ್ರೆ, ಅರ್ಕಪತ್ರೆ – ವೈದ್ಯಶಾಸ್ತ್ರದಲ್ಲಿ ಈ ಪತ್ರೆಗಳಿಗೆ ವಿಶೇಷ ಪ್ರಾಮುಖ್ಯವುಂಟು. ಅನೇಕ ವ್ಯಾಧಿಗಳನ್ನು ಈ ಪತ್ರೆಗಳು ನಿವಾರಣೆ ಮಾಡುತ್ತವೆ.

ಈ ವ್ರತವನ್ನು ನಾಲ್ಕು ಯುಗದಲ್ಲಿಯೂ ಮಾಡಿ ಇಷ್ಟ ಸಿದ್ಧಿ ಹೊಂದಿದವರು ಅನೇಕ. ತ್ರಿಪುರಾಸುರ ಸಂಹಾರ ಕಾಲದಲ್ಲಿ ಪರಮೇಶ್ವರನು ಈ ವ್ರತ ನಿರ್ವಹಿಸಿದ ನಂತೆ. ಭಗೀರಥನು ಗಂಗೆಯನ್ನು ಭೂಮಿಗೆ ತರಿಸಿಕೊಂಡನಂತೆ. ಅತ್ರಿಮುನಿ ಸಂತಾನವಂತನಾದ. ಕುಬೇರನು ಈ ವ್ರತವನ್ನು ಮಾಡಿ ನವನಿಧಿಗಳಿಗೆ ಅಧಿಪತಿಯಾದ. ದಾರಿದ್ರ್ಯಬಾಧೆಯಿಂದ ನೋಯುತ್ತಿದ್ದ ಕುಚೇಲನು ಹಣವಂತನಾದ. ಈ ವ್ರತವನ್ನು ಮಾಡಿ ಧರ್ಮರಾಜನು ರಾಜ್ಯಭೋಗಗಳನ್ನು ಅನುಭವಿಸಿದನಂತೆ.

ಹಿಂದುಗಳ ಹಬ್ಬಗಳಲ್ಲಿ ವೈಜ್ಞಾನಿಕ ವಿಶೇಷಗಳು ಇವೆ. ಜಂತುಗಳಲ್ಲಿ ಗಜ ಬಲ

(35 ನೇ ಪುಟ ನೋಡಿ)

## ಆರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ. ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

# ಹರಿದಾಸರು - ತಿಮ್ಮಪ್ಪ

## — ನಿಂದಾಸ್ತುತಿ

ವಿಜಯದಾಸರು ತಿರುಪತಿಯ ವೆಂಕಟೇಶ್ವರನ ದರ್ಶನಕ್ಕಾಗಿ ಹಲವು ದಿವಸ ಕಾದರೂ ಸಿಗಲಿಲ್ಲ. ( ಇಂದಿನಂತೆ ಅಂದೂ ತಿರುಪತಿಗೆ ಬರುತ್ತಿದ್ದ ಭಕ್ತರ ಸಂಖ್ಯೆ ಅಸಂಖ್ಯವಾಗಿರಬೇಕು. ಇಂದಿಗೂ ದೇವರ ದರ್ಶನವಾಗಬೇಕಾದರೆ 'ಕ್ಯೂ' ನಲ್ಲಿ ನಾಲ್ಕೈದು ಘಂಟೆಗಳು ಕಾಯಬೇಕಷ್ಟೆ. ) ಆಗ ಅವರು ನಿರಾಶೆಯಿಂದ ಸಿಟ್ಟಾಗಿ,

ಪರದೇಶಿ ನೀನು ಸ್ವದೇಶಿ ನಾನು
ಪರಮ ಭಾಗವತರನು ಬಾ
ಹೋಗಿ ಕೇಳುವಾ || ಪ ||
ಎನಗೆ ಜನಕನು ನೀನು ನಿನಗಾವ
ಜನಕನೋ
ಜನನಿ ಇಂದಿರೆ ಎನಗೆ ನಿನಗಾವಳೋ
ವನಜ ಪೀಠನು ಭ್ರಾತ ನಿನ್ನ
ಭ್ರಾತನಾರು
ಇನಸಮನು ಮಾತುಳನು ನಿನ್ನ
ಮಾತುಳನೆಲ್ಲಿ
ಸುರನದಿ ಅಗ್ರಜಳು ನಿನ್ನ ಅಗ್ರಜಳಾರು
ಶರನಿಧಿಯು ಭಾವ ನಿನಗಾವ ಭಾವ
ಸ್ಮರನು ಕಿರಿಸಾಭಾವನು ನಿನ್ನ
ಸಾಭಾವನಾರು
ಉರಗಪತಿ ಕಿರಿಯಯ್ಯ ನಿನ್ನ
ಕಿರಿಯಯ್ಯನಾರು
ಧರಣಿಯು ಸಹಮಾತೆ ನಿನ್ನ ಸಹ-
ಮಾತೆ ಯಾರು
ಸುರರು ಬಂಧುಗಳೆನಗೆ ನಿನಗಾವರು
ಧರಣಿಧರ ವಿಜಯವಿಠಲರೇಯ ನಿನ್ನ
ಚರಣಸೇವಕ ನಾನು ನೀನಾರ
ಸೇವಕನೋ

ಎಂದು ವೆಂಕಟೇಶ್ವರನಿಗಿಲ್ಲದ ಬಂಧುಬಳಗದವರು ತಮಗಿರುವರೆಂದು ಹೇಳಿ ಅವನ ದರ್ಶನಕ್ಕಾಗಿ ಹಾತೊರೆದಿರುವರು. ಇಲ್ಲಿ ದಾಸರು ಶ್ರೀಹರಿಯನ್ನು 'ಪರದೇಶಿ' ಎಂದು ಹೇಳಿ ಅವನ ಅನಾದಿನಿತ್ಯತ್ವ, ಸರ್ವೋತ್ತಮತ್ವಗಳನ್ನು ಧ್ವನಿಸಿರುವರು.

ಹದಿನಾಲ್ಕು ಲೋಕಗಳ ಒಡೆಯನೂ, ಲಕ್ಷ್ಮೀರಮಣನೂ, ಸುವರ್ಣಗಿರಿ ವಾಸಿಯೂ ಆದವನು ಶ್ರೀ ವೆಂಕಟೇಶ್ವರನು. ಆದರೂ ಅವನಿಗೆ ಮಣ್ಣಿನ ಕುಡಿಕೆಯಲ್ಲಿ ನೈವೇದ್ಯವನ್ನು ಸಮರ್ಪಿಸಬೇಕು. ವೆಂಕಟೇಶ್ವರನು ಭಕ್ತನೊಬ್ಬನ ಮಣ್ಣಿನ ತುಳಸಿಯ ಅರ್ಪಣೆಗೆ ಮೆಚ್ಚಿ, ಆ ಭಕ್ತನ ಸವಿನೆನಪಿಗಾಗಿ ಮಡಕೆಯಲ್ಲಿ ತಯಾರಿಸಿದ ಪದಾರ್ಥಗಳನ್ನು ಮಾತ್ರ ನೈವೇದ್ಯವಾಗಿ ಸ್ವೀಕರಿಸುತ್ತಾನೆ ಎನ್ನುವುದು ಪ್ರತೀತಿ. ಅದನ್ನು ನೋಡಿ ವಿಜಯದಾಸರು,

ಜಯ ಮಂಗಳಂ ನಿತ್ಯ ಶುಭಮಂಗಳಂ
ತೊಳಸದಕ್ಕಿಯ ತಿಂಬ ಕಿಲುಬು
ತಳಿಗೆಯಲುಂಬ
ಕೊಳಗದಲಿ ಹಣಗಳನು ಅಳೆದುಕೊಂಬ
ಇಲ್ಲ ಕಾಸು ಎಂದು ಸುಳ್ಳು
ಮಾತಾಡಿದರೆ
ಎಲ್ಲವನು ಕಸುಗೊಂಬ ಕಳ್ಳದೊರೆಗೆ
... ... ... ... ... ... ... ...
ಗಿಡ್ಡಹಾರವನಾಗಿ ಬಡ್ಡಿದಾನವ ಬೇಡಿ
ದುಡ್ಡು ಕಾಸುಗಳಿಗೆ ಕೈಯನೀಡಿ
ಅಡ್ಡಬಿದ್ದ ಜನರ ವಿಡ್ಡೂರಗಳ ಕಳೆದು
ದೊಡ್ಡವರ ಮಾಳ್ಪ ಸಿರಿವಿಜಯವಿಠಲನೆ

ಎಂದು ಹಾಸ್ಯಮಾಡಿರುವರು. ಇಲ್ಲಿ ದಾಸರು ಭಗವಂತನನ್ನು ಕೊಂಡಾಡಿರುವ ಸರಣಿ ಭಕ್ತನಿಗೂ, ಭಗವಂತನಿಗೂ ಇರುವ ಸಲಿಗೆಯನ್ನು ಸುವ್ಯಕ್ತಪಡಿಸುತ್ತದೆ. ಶ್ರೀಹರಿ ಸರ್ವಾಂತರ್ಯಾಮಿಯಾಗಿದ್ದು, ಭಕ್ತರು ಅರ್ಪಿಸುವ ನೈವೇದ್ಯವನ್ನು ಬಂದು ಸ್ವೀಕರಿಸುವುದರಿಂದ 'ತಿರಿದುಂಬ ತಿರುಮಲೇಶ' ನಾಗಿದ್ದಾನೆನ್ನುವುದು ವಿಜಯದಾಸರ ಅಭಿಮತ. ಆದ್ದರಿಂದ,



ತಿರಿದುಂಬುವ ನೀನು ತಿರುಮಲೇಶ
ಮರುಗಲ್ಯಾತಕೆ ಇನ್ನು ಮನಸಿನೊಳಗೆ
ಪ್ರತಿದಿನವು
ಬಲಿರಾಯ ಬಲುದಾನವನು
ಮಾಡುತಿರಲಾಗಿ
ಇಳೆಯಸುರ ವೇಷವನ್ನು ಧರಿಸಿ ಪೋಗಿ
ಹಲುಬಿ ಬಾಯಿದೆರೆದು ತ್ರಿಪಾದ
ತಿರುಪೆಕೊಂಡು
ನಿಳಿಯ ಬಾಗಿಲು ಕಾಯ್ದ
ನಿಗಮ[illegible]
ಗೋಪಳ್ಳಿಯಲ್ಲಿ ಜನಿಸಿ ಗೋ[illegible]
[illegible]
ಗೋಪಾಲಕರ [illegible]

ಶ್ರೀ ಕೆ.ಎಂ. ಅಚ್ಯುತಕುಮಾರ
ಎಂ.ಎ.

ತಾಪಸರು ಯಜ್ಞಾಕರ್ಮಾದಿಗಳು
ಮಾಡುತಿರೆ
ಶ್ರೀಪತಿ ಅನ್ನತಿರಿದುಂಡು ಕ್ಷುಧೆಯನು
ಕಳೆದೆ
ಅಂದು ಈ ಪರಿಯ ಯಾಚಕವೃತ್ತಿ
ಯನ್ನು ಮಾಡಿ
ಇಂದೆನ್ನ ಹೃತ್ಕಮಲದೊಳಗೆ ಬಂದೂ
ನಿಂದು ಮನೆಯನೆ ತಿಂದುಂಬುವ
ನೀನಲ್ಲದೆ
ಸಂದೇಹವೇಕೆ ಎನಗೆ ವಿಜಯ-
ವಿಠಲರೇಯ

ಎಂದು ಹಾಸ್ಯಮಾಡಿದ್ದಾರೆ.

ಕನಕದಾಸರು "ಬಂದೆವಯ್ಯ ಗೋವಿಂದ ಶೆಟ್ಟಿ ನಿನ್ನ ಹರಿವಾಣ ತೀರ್ಥಪ್ರಸಾದ ಉಂಟೆನಲಾಗಿ" ಎಂದು ತಿರುಪತಿಯ ತಿರುಮಲೇಶನನ್ನು ಹೊಗಳುತ್ತಾ,

ಅಪ್ಪವು ಅತಿರಸ ತುಪ್ಪವು ಬಿಸಿಹಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯಗಳನ್ನೆಲ್ಲ
ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ
ಒಡೆದ ಮಡಕೆ ತಂದು ಇಡಿದು ನಾಮವ
ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯಗಳಿಸುವ ಕಡುಲೋಭಿ ಶೆಟ್ಟಿ
ಶೇಷಗಿರಿಯಲ್ಲಿ ವಾಸವಾಗಿಹ ಸೆಟ್ಟಿ
ದೇಶದೇಶಕ್ಕೆ ಹೆಸರಾದ ಶೆಟ್ಟಿ
ಕಾಸುಕಾಸಿಗೆ ಬಡ್ಡಿ ಗಳಿಸಿಕೊಂಬ ಆದಿ
ಕೇಶವ ನಾರಾಯಣ ತಿಮ್ಮಶೆಟ್ಟಿ

ಎಂದು ವಿಡಂಬಿಸಿ ಸ್ತುತಿಸಿರುವರು. ತಿರುಪತಿಯಲ್ಲಿ ನಡೆಯುವ ವ್ಯವಹಾರವನ್ನು ನೋಡಿ ವರ್ಣಿಸುವ ದಾಸರವಾಣಿಯಲ್ಲಿ ಹೊಸತನವಲ್ಲದೆ ಹಗುರವಾದ ಹಾಸ್ಯವೂ ಬೆರೆತು ಬಂದಿದೆ. ತಿಮ್ಮಪ್ಪನನ್ನು ಶೆಟ್ಟಿಯನ್ನಾಗಿ ನೋಡಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ. ಪುರಂದರದಾಸರು ದೇವರ ರೂಪವನ್ನು ನೋಡಿ ತಮಾಷೆ ಮಾಡಿರುವುದುಂಟು. 'ಫಣೆಯ ನೋಡಿದೆನು ವೈಕುಂಠನ' ಎಂಬಲ್ಲಿ ತಿರುಪತಿಯ ತಿಮ್ಮಪ್ಪನನ್ನು ಬೆಂದ ಕೆಂಪಕ್ಕಿ ಅನ್ನವ ತಿನ್ನುವವನು. ಬಡ್ಡಿಯಲ್ಲಿ ಒಂದು ಕಾಸು ಕಡಿಮೆ ತೆಗೆದುಕೊಳ್ಳದೆ ಕ್ಷಮಿಸದವನು. ವಡೆ, ದೋಸೆ, ಅನ್ನ ಮಾರುವವನು. ಆದರೂ ತನ್ನ ಸೇವಕರ ಜೊತೆಯಲ್ಲಿ ಸಂತೋಷದಿಂದ ಕುಣಿದಾಡುವಂತಹವನು ಎಂದೆಲ್ಲ - ಹಾಡಿರುವರು. ಸಮಸ್ತ ಲೋಕದ ಸರ್ವದೇವತೆಗಳಿಗೂ ಶ್ರೀಹರಿ ಒಡೆಯನಾಗಿರುವನು. ಅವನ ಭಕ್ತರು ಅವನ ಆಜ್ಞಾಧಾರಕರು, ಅಸ್ವತಂತ್ರರು. ಆದರೂ ಆ ಮೂರ್ತಿಯ ಮೆರವಣಿಗೆ (ಉತ್ಸವ) ಮಾಡುವಾಗ ಭಕುತ ಜನ ಮುಂದೆ ನಿಂತು ಶ್ರೀಹರಿಯನ್ನು ಹಿಂದೆ ಹಾಕುವರು. ಆದ್ದರಿಂದ ವಿಜಯದಾಸರು ಶ್ರೀಹರಿಗಿಂತ ಹರಿಭಕ್ತರೇ ಮಿಗಿಲು ಎಂದು ವ್ಯಂಗ್ಯವಾಗಿ,

ಭಕುತಜನ ಮುಂದೆ ನೀನವರ ಹಿಂದೆ
ಯುಕುತಿ ಕೈಕೊಳ್ಳದು ಗಯಾಗದಾ-
ಧಾರನೆ
ಕಟ್ಟಿರಡು ಬಿಗಿದು ನದಿಸೂಸಿ ಪರಿವೃತ
ಬರಲು
ಕಟ್ಟಲೆಯಿಂದ ಹರಿಗೋಲು ಹಾಕಿ
ನೆಟ್ಟನೆ ಆಚೆಗೀಚೆಗೆ ಪೋಗಿ ಬರುವಾಗ
ಹುಟ್ಟು ಮುಂದಲ್ಲದೆ ಹರಿಗೋಲು
ಮುಂದೆ?
ಕಾಳೆ ಹೆಗ್ಗಾಳೆ ದುಂದುಭಿ
ಭೇರಿ ತಮಟೆ
ನಿಸ್ಸಾಳೆ ನಾನಾ ವಾದ್ಯ ಭೂಷಣ –
ಗಳು
ಸಾಲಾಗಿ ಬಳಿವಿಡಿದು ಸಂಭ್ರಮದಿ
ಬರುವಾಗ
ಆಳು ಮುಂದಲ್ಲದೆ ಅರಸು
ತಾ ಮುಂದೆ?
ಉತ್ಸವವಾಹನ ಬೀದಿಲಿ ಮೆರೆಯುತ
ಬರಲು
ಸತ್ಸಂಗತಿಗೆ ಹರಿದಾಸರಲ್ಲದೆ
ವತ್ಸ ಸಿರಿ ವಿಜಯವಿಠಲರೇಯ
ವೆಂಕಾಟಚಲ
ವತ್ಸ ಮುಂದಲ್ಲದೆ ಧೇನು ತಾ ಮುಂದೆ?

ಎಂದು ನುಡಿದಿರುವರು.

ವ್ಯಾಸರಾಯರು ಭಕ್ತ ಮತ್ತು ಭಗವಂತನ ಸಂಬಂಧವನ್ನು ಚಿತ್ರಿಸುವ ಸುಳಾದಿಯಲ್ಲಿ ನಿಂದಾಸ್ತುತಿ ಕಾಣಿಸಿಕೊಂಡಿದೆ.

ತಾಯಿಯೆಂಬೆನೆ ನಿನ್ನ – ಧ್ರುವನ
ತಾಯಿ ನಿನ್ನಂತೆ ಕಾಯಿದಳೆ
ತಂದೆಯೆಂಬೆನೆ ನಿನ್ನ – ಪ್ರಹ್ಲಾದನ
ತಂದೆ ನಿನ್ನಂತೆ ಕಾಯಿದನೆ
ಭ್ರಾತೃ ಎಂಬೆನೆ ನಿನ್ನ - ವಿಭೀಷಣನ್ನ
ಭ್ರಾತೃ ನಿನ್ನಂತೆ ಕಾಯಿದನೆ
ಪುತ್ರ ಎಂಬೆನೆ ನಿನ್ನ - ಉಗ್ರಸೇನನ
ಪುತ್ರ ನಿನ್ನಂತೆ ಕಾಯಿದನೆ
ಮಿತ್ರ ಎಂಬೆನೆ ನಿನ್ನ - ಗಜೇಂದ್ರನ
ಮಿತ್ರರು ನಿನ್ನಂತೆ ಕಾಯಿದರೆ
ಆದ ಅನಿಮಿತ್ತಬಂಧುವೋ
ನೀನಾವ ಕರುಣಾಸಿಂಧುವೋ
ದೇವಕೃಷ್ಣ ನಿನಗೆ ಬಂಟರಲಿ ನೆಂಟತನ
ಹೊಸ ಪರಿಯಯ್ಯ

ಮುಂದಿನ ಕೀರ್ತನೆಯಲ್ಲಿ ಶ್ರೀ ಪಾದರಾಜರು ದೇವರೊಂದಿಗೆ ಸಲಿಗೆಯಿಂದ ಆಡುವ ನುಡಿಗಳು ಗಂಭೀರವೂ ಗಹನವೂ ಆಗಿವೆ.

ಹ್ಯಾಂಗೆ ಕೊಟ್ಟನು ಹೆಣ್ಣು ಸಾಗರನು
ಇವನಿಗೆ
ಶೃಂಗಾರ ಪುರುಷರು ಬಹುಮಂದಿ
ಇರಲು
ಗುಷ್ಟು ಮೈಯ ಕಂಪು ತಟ್ಟದಾತನ
ಕಣ್ಣು
ಮುಟ್ಟಿ ನೋಡಿದರೆ ಮೈಯನೆ ಕಠಿಣವು
ಸೊಟ್ಟು ಮೋರೆಯು ಇವಗೆ
ಎಷ್ಟುದ್ದ ಹಲ್ಲುಗಳು
ಇಷ್ಟು ಘೋರಾದ ಅಳಿಯ ಎಲ್ಲಿ
ದೊರಕಿದನೋ
ಕಾಡುವ ಭಿಕ್ಷುಕನು ಮಾಡದುದ
ಮಾಡುವನು
ನೋಡಿದರೆ ತಲೆಯು ಜಟೆ ಕಟ್ಟಿಹುದು
ಓಡೋಡುತಲಿ ಕಳುವ ಬೆಡಗು
ನುಡಿಗಾರನಿಗೆ
ನೋಡಿನೋಡಿ ಹೆಣ್ಣು ಹೇಗೆ
ಕೊಟ್ಟನೋ ಇನ್ನು

(36 ನೇ ಪುಟ ನೋಡಿ)

# ಗೋವಿಂದ ವೈಭವಂ

ವಿದ್ವಾನ್ ಬ. ನ. ಗುಂಡೂರಾವ್

ಭಾರತೀಯ ಸಾಹಿತ್ಯದಲ್ಲಿ ಪ್ರಮುಖವಾದ ಎರಡು ಶಾಖೆಗಳೆಂದರೆ-ರಾಮಕಾವ್ಯ-ಕೃಷ್ಣಕಾವ್ಯ. ರಾಮ-ಕೃಷ್ಣರನ್ನು, ಅವರ ವಿವಿಧ ಲೀಲಾವಿನೋದಗಳನ್ನು ಕುರಿತು ಬಹುಶಃ ಭಾರತದ ಎಲ್ಲ ಭಾಷಾ ಸಾಹಿತ್ಯದಲ್ಲೂ ವಿಪುಲ ಪ್ರಮಾಣದಲ್ಲಿ ಕಾವ್ಯಗಳು ರಚಿತವಾಗಿವೆ.

ಉಪಜೀವ್ಯಕಾವ್ಯಗಳೆಂದು ಹೆಸರು ಪಡೆದ ಆದಿಕಾವ್ಯ ಶ್ರೀಮದ್ರಾಮಾಯಣ, ಭಾರತ, ಭಾಗವತಗಳು ಭಾರತೀಯ ಜನ ಜೀವನದ ಮೇಲೆ, ಸಾಹಿತ್ಯದ ಮೇಲೆ, ಸಂಗೀತದ ಮೇಲೆ ಗಂಭೀರ ಪರಿಣಾಮವನ್ನು ಬೀರಿವೆ.

ಶ್ರೀರಾಮಚಂದ್ರ ಮರ್ಯಾದಾಪುರುಷೋತ್ತಮ, ಶ್ರೀ ಕೃಷ್ಣ - ಕಮನೀಯ, ಮಧುರ; ರಾಮನನ್ನು ಕಂಡರೆ ಗೌರವ-ಭಕ್ತಿ, ಕೃಷ್ಣನನ್ನು ಕಂಡರೆ ಪ್ರೀತಿ, ವಾತ್ಸಲ್ಯ. ಒಂದು ಕಡೆ ಶೀಲಶೃಂಗಾರ; ಇನ್ನೊಂದು ಕಡೆ ರುಚಿರಶೃಂಗಾರ; ಒಂದು ಕಡೆ ಭವ್ಯತೆ; ಒಂದು ಕಡೆ ಲಾಲಿತ್ಯ. 'ರಾಮನ ವ್ಯಕ್ತಿಗತ ಜೀವನಕ್ಕೆ ಪ್ರಾಧಾನ್ಯವಾದರೆ ಕೃಷ್ಣನ ಉಪದೇಶಕ್ಕೆ ಪ್ರಾಧಾನ್ಯ. ರಾಮ ನಡೆದಂತೆ ನಡೆಯಬೇಕು; ಕೃಷ್ಣ ನುಡಿದಂತೆ ನಡೆಯಬೇಕು' – ಎಂಬ ಗಾದೆಯ ಮಾತಿದೆ. ಇದು ಎಂದಿಗೂ ಅದಲುಬದಲಾಗಬಾರದು. ಇವರಿಬ್ಬರೂ ಭಾರತೀಯರಿಗೆ ಆರಾಧ್ಯ ದೇವತೆಗಳು. ಇವರಿಬ್ಬರನ್ನು ಕುರಿತ ಕಾವ್ಯಗಳು - ಪವಿತ್ರ ಕಾವ್ಯಗಳು. ಹಿಂದಿ ಸಾಹಿತ್ಯದ ಅಗ್ರಗಣ್ಯ ಕವಿಗಳಲ್ಲೊಬ್ಬರಾದ ಶ್ರೀ ಮಧುರಾನಾಥಶಾಸ್ತ್ರಿಯವರು ಬರೆದ ಒಂದು ಕಮನೀಯ ಕಾವ್ಯ- "ಗೋವಿಂದ ವೈಭವಮ್".

೪೪ ಪ್ರಕರಣಗಳ ಈ ಕಾವ್ಯ ಒಂದು ವಿಶಿಷ್ಟ ಜಾತಿಗೆ ಸೇರಿದೆ. ಆದ್ಯಂತವಾಗಿ



ಇದು ಶ್ರೀಕೃಷ್ಣನ ಯಶೋಗಾನವೇ ಆದರೂ ಹಯಗ್ರೀವ, ಧನ್ವಂತರಿ, ಶಂಕರ, ಗಣೇಶ-ಮಹಾಲಕ್ಷ್ಮಿ-ಸರಸ್ವತಿ-ಪಾರ್ವತಿ, ಗಂಗಾ-ಯಮುನಾ- ಮುಂತಾದ ವಿವಿಧ ದೇವತೆಗಳನ್ನು ಕುರಿತು ಈ ಕಾವ್ಯದಲ್ಲಿ ಸುಂದರ ಕವಿತೆಗಳಿವೆ. ಇದರ ಜತೆಗೆ ಗೋಪಕಿಶೋರನ ರೂಪಮಾಧುರ್ಯ, ವೇಣುಗಾನ ವೈಖರಿ, ನವವಿಧ ಭಕ್ತಿ, ವೈರಾಗ್ಯ, ಶಾಂತರಸ, ರಾಸಲೀಲೆ, ಗಜೇಂದ್ರ ಮೋಕ್ಷ, ಮುಂತಾದ ಪ್ರಸಂಗಗಳ ರಮಣೀಯ ವರ್ಣನೆ ಇದೆ.

ಈ ಕಾವ್ಯದಲ್ಲಿನ ಇನ್ನೊಂದು ಸೊಗಸೆಂದರೆ - ವರ್ತಮಾನ ಶಿಕ್ಷಣ ಪದ್ಧತಿ, ಸಂಸ್ಕೃತಭಾಷೆ, ದರ್ಶನ ಶಾಸ್ತ್ರಗಳು - ಸ್ತ್ರೀ ಶಿಕ್ಷಣ ಮುಂತಾದ ವಿಷಯಗಳನ್ನು ಕುರಿತು ಸೊಗಸಾದ ಕವಿತೆಗಳ ಮೂಲಕ ಲೇಖಕರು ತಮ್ಮ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ವಸ್ತುತಃ ಇದು ಭಕ್ತಿರಸ ಪ್ರಧಾನವಾದ ಕಾವ್ಯ.

ಈ ಕಾವ್ಯದ ಅಸಾಧಾರಣ ಯೋಗ್ಯತೆಯೆಂದರೆ ಛಂದೋವಿನ್ಯಾಸದಲ್ಲಿ ಕವಿ ಮಾಡಿರುವ ಚಮತ್ಕಾರ - ಹೊಸಪ್ರಯೋಗ - ಸಂಪ್ರದಾಯದಂತೆ ಸಂಸ್ಕೃತ ಛಂದಸ್ಸಿನಲ್ಲಿ ಈ ಕಾವ್ಯವು ರಚಿತವಾಗಿಲ್ಲ. ದೇವಘನಾಕ್ಷರಿ, ಅನಂಗಶೇಖರ, ಚೌಪಾಯಿ, ಅಶ್ವಘಾಟಿ, ದೋಹಾ-ಬರವೈ ಮುಂತಾದ ಹಿಂದಿಯ ವಿವಿಧ ಛಂದೋವಿನ್ಯಾಸ ಈ ಗ್ರಂಥದಲ್ಲಿ ಕಾಣುತ್ತದೆ. ಉರ್ದು ಕಾವ್ಯಗಳಲ್ಲಿ ಕಾಣುವ ಗಜಲ್, ಲಾವಣಿ, ರೇಖ್ತಾ ಮುಂತಾದ ಛಂದೋವೈವಿಧ್ಯವೂ ಈ ಗ್ರಂಥದಲ್ಲಿದೆ.

ಸಮಗ್ರ ಕಾವ್ಯ ಸಂಸ್ಕೃತ ಭಾಷೆಯಲ್ಲಿದೆ; ಛಂದಸ್ಸು ಮಾತ್ರ ಸಂಸ್ಕೃತದ್ದಲ್ಲ – ಇದೇ ಈ ಗ್ರಂಥದ ವೈಶಿಷ್ಟ್ಯ. ಕಾವ್ಯದೇವಿಯನ್ನು ಇಲ್ಲಿ ರೂಪಕಾಲಂಕಾರವೆಂಬ ಕಿರೀಟದಿಂದ, ಉತ್ಪ್ರೇಕ್ಷಾಲಂಕಾರವೆಂಬ ಕರ್ಣಾಭರಣದಿಂದ, ಹೇತ್ವಲಂಕಾರವೆಂಬ ಹಾರದಿಂದ, ಶ್ಲೇಷಾಲಂಕಾರವೆಂಬ ಕಡಗಕಂಕಣಗಳಿಂದ, ಪರಿಕರಾಲಂಕಾರವೆಂಬ ಕಾಂಚೀದಾಮದಿಂದ ಅಲಂಕರಿಸಲಾಗಿದೆ – ಎನ್ನುತ್ತಾರೆ ಕವಿ.

ವಿನಯ - ಮಾನಸಸನಿವೇದನ - ಮನಃ ಪ್ರಬೋಧನ - ಸೌಂದರ್ಯಸುಷುಮಾ-ಜೀವನ ಸಂಧ್ಯಾ - ಕಾರುಣ್ಯಂ - ಮನಃಪ್ರಮೋದ - ವಿಶ್ವಾತ್ಮಾ - ವೈರಾಗ್ಯಂ - ಗೀತಗೋಪುರಂ ಮುಂತಾದ ಶೀರ್ಷಿಕೆಗಳಿಂದ ಕಂಗೊಳಿಸುವ ಈ ಕಾವ್ಯ ಇಂದೂ ಸಹ ಸಂಸ್ಕೃತವು ಜೀವಂತಭಾಷೆ — ಎಂಬುದಕ್ಕೆ ಉಜ್ವಲ ನಿದರ್ಶನವಾಗಿದೆ.

ಈ ಕಾವ್ಯದ ಕೆಲವು ಪ್ರಸಂಗಗಳ ರಸ ವಿವೇಚನೆ ಮಾಡುವುದು ಅಪ್ರಾಸಂಗಿಕವಾಗಲಾರದು.

ಸೃಷ್ಟಿಯೇ ಒಂದು ವಿಚಿತ್ರವಾದರೆ ಅದಕ್ಕೂ ಮುಂಚೆ ಏನಿತ್ತೆಂಬುದು ಇನ್ನೂ ವಿಚಿತ್ರವಲ್ಲವೇ? ಶಬ್ದಬ್ರಹ್ಮನ ಮೂರ್ತಿಮಾನ್ ಸ್ವರೂಪವಾದ ವೇದಗಳು ಮೂಡಿ ಬಂದದ್ದು ಮತ್ತೂ ವಿಚಿತ್ರವಲ್ಲವೇ? ವೇದ ಪುರುಷನಿಗೆ ಛಂದಸ್ಸು ಪಾದ ; ಜ್ಯೋತಿಷ್ಯ ಕಣ್ಣು, ಶಿಕ್ಷ ನಾಸಿಕ, ಕಲ್ಪವೇ ಹಸ್ತ, ನಿರುಕ್ತವೇ ಕಿವಿ, ವ್ಯಾಕರಣವೇ ಮುಖ;— ಈ ವೇದಪುರುಷನ ಪೂರ್ಣ ಅನುಗ್ರಹ ಭಾರತೀಯರಿಗೆ ಸದಾ ದೊರೆಯುತ್ತಿರಲಿ ಎಂದು ಕವಿ ಹಾರೈಸುತ್ತಾರೆ.

ಒಂದೇ ಕವಿತೆಯಲ್ಲಿ ಸಂಸ್ಕೃತಭಾಷೆಯ ಬಗ್ಗೆ ಪ್ರಶ್ನೋತ್ತರಗಳು ಹೀಗಿದೆ—

ಇಹ ಸಕಲ ಭಾಷಾ ಜನ್ಮದಾ ಕಾ ?
ಭಾಸ್ವತೀ ಸುರಭಾರತೀ
ವದ ವೇದಜನನೀ ಕಾ ? ಜಗತ್ಯೋ-
ಜಸ್ವತೀ ಸುರಭಾರತೀ ।
ಅನುಪಮಸರಸಸಾಹಿತ್ಯಧನಿ ಕಾ ಕಾ ?
ಸತೀ ಸುರಭಾರತೀ
ವದ ಭಾರತಾನುಗತಾ ಭವೇತ್ ಕಾ
ಭಾರತೀ ? ಸುರಭಾರತೀ ॥

ಸಕಲಭಾಷೆಗಳ ಜನ್ಮದಾತೆ ಯಾರು? ವೇದಜನನಿ ಯಾರು? ಅನುಪಮ ಸಾಹಿತ್ಯ ಸಂಪತ್ತು ಯಾರಲ್ಲಿದೆ? ಈ ಎಲ್ಲ ಪ್ರಶ್ನೆಗಳಿಗೂ ಒಂದೇ ಉತ್ತರ - ಸುರಭಾರತಿ ಸಂಸ್ಕೃತ!

ಕೃಷ್ಣಂ ಕೀರ್ತಯಾಮಿ ವ್ರಜವಲ್ಲಭಂ
ವಿಭಾವಯಾಮಿ
ಗೋವಿಂದಂ ಗೃಣಾಮಿ ನಂದಸೂನುಂ
ನಂದಯಾಮ್ಯಹಂ ॥
ಶ್ರೀಪತಿಂ ಶ್ರಯಾಮಿ ಚಕ್ರಪಾಣಿಂ
ಚಿಂತಯಾಮಿ ಚಿರಂ
ಪದ್ಮಪತಿಂ ಪೂಜಯಾಮಿ ಶೌರಿಂ
ಶೀಲಯಾಮ್ಯಹಂ ॥
ಯಜ್ಞೇಶಂ ಯಜಾಮಿ ವರ್ಣಯಾಮಿ
ಗಿರಾ ವಿಶ್ವಪತಿಂ
ಮಾನಯಾಮಿ ಮಾಧವಂ ರಮೇಶಂ
ರಾಧಯಾಮ್ಯಹಂ ॥
ಭೂತಿದಂ ಭಜಾಮಿ ಭೂತಭಾವನಂ
ವಿಭಾವಯಾಮಿ
ಭಕ್ತೇಶಂ ಭಣಾಮಿ ಭಗವಂತಂ
ಭಾವಯಾಮ್ಯಹಮ್ ॥

ಈ ಕವಿತೆಯಲ್ಲಿ ಕೇವಲ ಸಮಾನಾರ್ಥ ಕೊಡುವ ಕ್ರಿಯಾಪದಗಳ ಪಟ್ಟಿ ಇದ ಎಂದು ಸಾಮಾನ್ಯ ಜನ ಭಾವಿಸಿದರೂ, ಕವಿಯ ಆತ್ಮಭಕ್ತಿ ಭಗವಂತನಲ್ಲಿ ಎಷ್ಟು ಮಟ್ಟಿಗೆ ಸಂಲಗ್ನವಾಗಿದೆಯೆಂಬುದು ಸೂಕ್ಷ್ಮಮತಿಗೆ ಗೋಚರವಾಗುತ್ತದೆ.

ನ ಖಲು ಗೋಪಿಕಾ ನಂದನೋಭವಾನ್
ಅಖಿಲ ಜೀವಿನಾಂ ಅಂತರಾತ್ಮದೃಕ್ ॥

ಇದು ಭಾಗವತದ ಒಂದು ವಾಕ್ಯರತ್ನ. ಗೋವರ್ಧನ ಗಿರಿಧಾರಿ ಕೇವಲ ಗೋಪ ಕುಮಾರನಲ್ಲ-ಸಮಸ್ತ ಜೀವಿಗಳ ಅಂತರಾತ್ಮ ಅಂತಸ್ಸೂತ್ರಚೇತನ-ಅತ ವಿರಾಟ್‌ಪುರುಷ. ಈ ಬ್ರಹ್ಮವಸ್ತುವನ್ನು ಕುರಿತು ಜಗತ್ತಿನಲ್ಲಿ ಅದೆಷ್ಟು ಜಿಜ್ಞಾಸೆ ನಡೆದಿದೆ!! ಕೆಲವರು ಈ ಅಂತರ್ಯಾಮಿಯನ್ನು ಸಾಕಾರನೆಂದರು, ಕೆಲವರು ನಿರಾಕಾರನೆಂದರು, ನಿರ್ಗುಣನೆಂದರು - ಸಗುಣನೆಂದರು, ಸಾಕ್ಷಿಸ್ವರೂಪನೆಂದರು, ನಿರ್ಲಿಪ್ತನೆಂದರು, ವ್ಯಾಪಕತತ್ವವೆಂದರು. ಈ ಅಗೋಚರ ಶಕ್ತಿಯನ್ನು ಕುರಿತು ನಡೆಸಿದ ಚಿನ್ತನ ಮನ್ಥನಗಳು ಒಂದೇ ಎರಡೇ? ಈ ಕಾವ್ಯದಲ್ಲಿ ಕವಿ, ಜಗಜ್ಜೀವನವನ್ನು ಜೀರ್ಣನೌಕೆಯೆಂದೂ ಅದರ ಉತ್ಥಾನ ಪತನಗಳು ಚಿನ್ಮಯನೂ ಆನಂದರೂಪಿಯೂ ಆದ ಆತನಿಗೆ ಸೇರಿದ್ದೆಂದೂ ಹೇಳುತ್ತ—

ಭವಸಲಿಲೇ ಕಾ ಜೀರ್ಣನೌಕಾ
ತ್ವದಧೀನೇಯಂ

ಎನ್ನುತ್ತಾರೆ. 'ಸೇವಕಸ್ತವೇತಿ ಕಥಂ ವಕ್ತುಂ ಪ್ರಭವಾಮಿ?' ನಾನು ನಿನ್ನ ಸೇವಕ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಚನೆಯ ಶುಲ್ಕವನ್ನು ರೂ 150-00 ಗಳಿಗೆ ನಿಗಧಿಗೊಳಿಸಲಾಗಿದೆ, ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಚನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವರನ್ನು ವಿಚಾರಿಸಬಹುದು.

**ಪೇಷ್ಕಾರ್**

ನೆಂದು ಹೇಗೆ ಹೇಳಿಕೊಳ್ಳಲಿ? 'ತ್ವನ್ನಾಮಾ ಶ್ರಯೋಹಮಿತಿ ವಕ್ತುಂ ನಾದ್ಯಕಾಲೋಮೇ' ನಿನ್ನ ನಾಮವೇ ಚರಮ ಆಶ್ರಯವೆಂದು ಹೇಳಿಕೊಳ್ಳುವ ಕಾಲವಿನ್ನೂ ಬಂದಿಲ್ಲವೆನ್ನು ತ್ತಾರೆ. ಆದರೆ ಯಾರ ಪಾಣಿಪಲ್ಲವಗಳಲ್ಲಿ ಅಮೃತಕಲಶವಿದೆಯೋ ಅಂತಹವನು ಜಗತ್ತಿನ ವಿವಿಧರೋಗಗಳಿಗೆ ಅದೇಕೆ ಚಿಕಿತ್ಸೆ ಮಾಡುತ್ತಿಲ್ಲ - ಎಂದು ಪ್ರಶ್ನೆಹಾಕಿಕೊಂಡಿದ್ದಾರೆ.

ಪ್ರತ್ಯಕ್ಷಂ ವಿಭಾತಿ ಪಾಣಿ ಪಂಕೇರುಹೇ
ಯಸ್ಯ ಸುಧಾ
ಸೋ ಅಯಂ ವಸುಧಾಯಾಃ ಕಿಂ ನ
ರೋಗರಾಶಿ ಶೋಷಸ್ಯಾತ್?

ಶ್ರೀ ಕೃಷ್ಣನ ಬಾಲಲೀಲಾವಿನೋದ ಗಳನ್ನೆಲ್ಲ ಒಂದು ಕವಿತೆಯಲ್ಲಡಗಿಸಿ ಅದಕ್ಕೆ ಪ್ರಾರ್ಥನೆಯ ಮಧುರ ರೂಪ ಕೊಟ್ಟು ರಸಮಯವಾಣಿಯಲ್ಲಿ ಛಂದೋಮಯವಾಗಿ ನುಡಿದಾಗ ಏನು ಸೊಗಸಿರುತ್ತದೆಂಬುದಕ್ಕೆ ಈ ಕವಿತೆ ಸಾಕ್ಷಿಯಾಗಿದೆ.

ಭೂಮಿವಲಯಂ ತಂ ದುಷ್ಟದೈತ್ಯೈ-
ರ್ಭಾರವಂತಂ ವೀಕ್ಷ್ಯ
ಲೋಕೇ ಅವತರಂತಂ ಶಕ್ತಿಮಂತಂ
ಶೀಲಯಾಮಹೇ ||
ಶಕಟಂ ಹರಂತಂ ಪಾವಯಂತಂ
ಪೂತನಾಂ ತಾಮಥ
ದಾವಾಗ್ನಿಂ ಪಿಬಂತಂ ಬಲವಂತಂ
ಚಿನ್ತಯಾಮಹೇ ||
ಕಾಳೀಯ ಫಣಾಸು ನೃತ್ಯವಂತಂ
ವಿಹರಂತಂ ವನೇ |
ಕಂಸಮುದ್ಧರಂತಂ ಕೇಶವಂ ತಂ
ಕ್ಷಾಮಯಾಮಹೇ ||
ಸರ್ವತೋಲಸಂತಂ ವಿಲಸಂತಂ ವ್ರಜ
ಗೋಪಿಕಾಸು |
ಪೀತಾಂಬರವಂತಂ ಭಗವಂತಂ
ಭಾವಯಾಮಹೇ ||

ಒಬ್ಬ ವ್ಯಕ್ತಿಯ ಬಾಳನ್ನೆಲ್ಲ ಪರೀಕ್ಷಿಸಿದಾಗ ಅಲ್ಲಿ ನಾಟಕದ ನಾಲ್ಕು ಅಂಕಗಳಂತೆ ನಾಲ್ಕು ಭಾಗ ಕಾಣುತ್ತದೆ. ಹುಟ್ಟಿನಿಂದ ಸಾವಿನವರೆಗಿನ ಅವಧಿಗೆ ಬಾಳೆಂದು ಹೆಸರಲ್ಲವೇ? ದಿವಸಾವಸಾನ ಸಮಯವನ್ನು ಸಂಧ್ಯಾಕಾಲವೆನ್ನುವಂತೆ ಜೀವನ ಸಂಧ್ಯೆ ಎಂಬ ಪದವನ್ನು, ಬಾಳಿಗನ್ವಯಿಸುವಂತೆ ಬಳಸಿದರೆ ತಪ್ಪೇನೂ ಆಗಲಾರದು. ಈ ಜೀವನ ಸಂಧ್ಯೆ ವ್ಯರ್ಥವಾಗದಂತೆ ಕರುಣಿಸು ಎಂದು ಪ್ರಾರ್ಥಿಸುತ್ತ ಕವಿ ಹೇಳುತ್ತಾರೆ.

ಜ್ಞಾನಮಕ್ಷರಾಣಾಂ ಕಿಂಚಿದಪಿ-
ದ್ದಯಯಾ ತೇ ಪುರಾ
ಜೀವನಪ್ರಭಾತೇ ಸುತೋ
ಜ್ಯೋತಿರುತ್ಪ್ಯವೇದ್ವಿಭೋ ||
ತದನುಕವಿತ್ವಕಲಾಪ್ರೌಢಿ
ಗ್ರಂಥನಿರ್ಮಾಣಾದಿ
ಯಸ್ಮಾತ್ಸಾಧುಸಮ್ಮಾನಾದಿ
ಸರ್ವಂಸಂಭವೇದ್ವಿಭೋ ||
ಸಾಂಪ್ರತಂ ತ್ವಜಾನನ್ನುಪರಾಮ
ಸಮಯಂ ಮೇ ಜನಾಃ
ಕಿಂ ಮೇ ಲೋಕರಂಜನಾದಿ ದಂಭೈಃ
ಸಂಭವೇದ್ವಿಭೋ ||
ಕೇವಲಂ ಪದಾಬ್ಜೇತವ ನಿತ್ಯಮಿದಂ
ಸಂಧ್ಯಾಯಾಮಿ
ಜೀವನಸ್ಯ ಸಂಧ್ಯಾಮಮ ವಂಧ್ಯಾ ನ
ಭವೇದ್ವಿಭೋ ||

ನಿನ್ನ ದಯೆಯಿಂದ ಸ್ವಲ್ಪ ಅಕ್ಷರಜ್ಞಾನ ವುಂಟಾಯ್ತು - ಅದು ಜೀವನ ಪ್ರಭಾತದಲ್ಲಿ ಸ್ವಲ್ಪ ಬೆಳಕು ನೀಡಿತು. ಆ ನಂತರ ಕಾವ್ಯ ನಿರ್ಮಾಣ, ಪ್ರೌಢಿಮೆ ತತ್ಫಲವಾಗಿ ಮಾನ ಸನ್ಮಾನಗಳೂ ಆಯ್ತು. ಆದರೆ ಈಗ ಜಗದ್ವ್ಯಾಪಾರದಿಂದ ವಿರಮಿಸುವ ಕಾಲ ಬಂದಿದೆ. ಜನರಂಜನೆಯಿಂದ ಏನೂ ಪ್ರಯೋಜನವಿಲ್ಲವೆಂಬ ಸತ್ಯ ಈಗೀಗ ಅರಿವಾಗುತ್ತಿದೆ. ಆದ್ದರಿಂದ ಈ ಬಾಳಸಂಜೆ ವ್ಯರ್ಥವಾಗದಂತೆ ನೀನೇ ಕೃಪೆ ಮಾಡಬೇಕು.

ಈ ಪದ್ಯ ಒಂದು ರೀತಿಯಲ್ಲಿ ನೋಡಿದರೆ ಜೀವನವಿಶ್ಲೇಷಣೆ. ಬಾಳು ಪಕ್ವವಾದಂತೆ ಅನುಭವ ಹಣ್ಣಾಗುತ್ತದೆ. ಜಳ್ಳುಗಟ್ಟಿಯನ್ನು ತೂಗಿನೋಡಿ ವಿಂಗಡಿಸುವ ವಿವೇಕ ಬರುತ್ತದೆ. ಶಾಂತಿಯ ಮಹತ್ವ ಕ್ರಮೇಣ ಅರಿವಾಗುತ್ತದೆ. ಕಾರ್ಯ ಚಟುವಟಿಕೆ ಸಾಕೆನಿಸುತ್ತದೆ. ಗೋವಿಂದಾಂಘ್ರಿ ಪದ್ಮ ಮೋದಯುನಿರತಂ - ಎನ್ನಿಸುತ್ತದೆ. ಜೀವನದ ಚರಿತಾರ್ಥತೆಯೆಂದರೆ ಇಷ್ಟೆ ತಾನೆ!!. ಇದು ತ್ರಿಕಾಲಾಬಾಧಿತವಾದ ಸತ್ಯ. ಯಾರ ಬಾಳಿಗಾದರೂ ಅನ್ವಯಿಸುವ ತತ್ವ - ಸತ್ವಪೂರ್ಣ ತತ್ವ.

ಗೋವಿಂದ ವೈಭವಂ – ಕಾವ್ಯದ ಒಂದು ಭಾಗ "ಗೀತಗೋಪುರಂ" ಮೂವತ್ತಾರು ರಮಣೀಯ ಗೀತೆಗಳು ಈ ಭಾಗದಲ್ಲಿವೆ. ಇವೆಲ್ಲವೂ ಗೇಯಕವಿತೆಗಳು - ವಿವಿಧ ರಾಗಗಳಲ್ಲಿ ಹಾಡಲಿಕ್ಕೆ ಸಾಧ್ಯ. ಮಾಂಡು - ದೇಶಮಲ್ಹಾರ - ಲಾವಣಿ - ಭಾಳಿ-ಗಜಲ್ - ನಾಟಿ ಮುಂತಾದ ರಾಗಗಳಲ್ಲಿ "ಗೀತಗೋಪುರ" ರಚಿತವಾಗಿದೆ. ರಾಗ ಮಾಧುರ್ಯಕ್ಕಾಗಿ ಕೆಲ ಒಂದ ಕವಿತೆಯನ್ನು ಉದಾಹರಿಸುತ್ತೇನೆ–

ವಿನಯಮಯುತ ಮಾನಸೇನ
ನಂದಗೋಪಬಾಲೇ || ಪಲ್ಲವಿ ||
ವಪುಷಾ ಘನಸುಂದರೇಣ
ನಂದಿತ ವ್ರಜಬಾಲೇ || ಅ.ಪ. ||
ಕುಂಡಲಮಿಹ ಗಂಡಲಂಬಿ
ಚಂಚತಿಚಪಲಾವಿಡಂಬಿ
ಕಮಲೋಪಮ ಚರಣ ಚುಂಬಿ
ಲಂಬಿತವನಮಾಲೇ || ೧ ||
ಉರಸಿ ಕುಸುಮಹಾರಧಾತಿ
ಶಿರಸಿಮುಕುಟಪಾವಿಭಾತಿ
ಯಮುನಾಪುಲಿನಾನಿ ಯಾತಿ
ತಿಲಕಾರ್ಚಿತ ಭಾಲೇ || ೨ ||
ಕ್ರೀಡತಿ ಕೃಷ್ಣೇನುರಹಸಿ
ರಾಧಾಮುಖಮುಗ್ಧಮನಸಿ
ಕಾಳೀಯ ಫಣನೃತ್ಯಸದಸಿ
ಯಮುನಾರ್ಪಿತ ತಾಲೇ || ೩ ||

ರಸಿಕಜನಮನೋಹಾರಿಯಾದ ಈ ಕಾವ್ಯ ರತ್ನ, ಭಕ್ತಿರಸ ಭೂಯಿಷ್ಠವಾಗಿ, ಸಹೃದಯ ಹೃದಯಾನಂದಕರವಾಗಿ, ಬಾಳಿಗೊಂದು ಬೆಳಕು ನೀಡುವ ಗ್ರಂಥರತ್ನವಾಗಿದೆ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ಶ್ರೀ ವರದೇಂದ್ರರು

ಭಗವಂತನ ಆಜ್ಞಾನುಸಾರ ಅನೇಕ ದೇವತೆಗಳೇ ಹರಿದಾಸರಾಗಿ ಈ ಸಾಧನ ಭೂಮಿಯಲ್ಲವತರಿಸಿ ಮುಕ್ತಿಯೋಗ್ಯರಲ್ಲಿ ಭಕ್ತಿಯ ಬೀಜವನ್ನು ಬಿತ್ತಿ, ತಮ್ಮ ಪದ ಪದ್ಯ ಸುಳಾದಿ ಉಗಾಭೋಗಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿ ಜಗನ್ಮಾನ್ಯರಾಗಿದ್ದಾರೆ. ವೇದ ಉಪನಿಷತ್ತು, ಪುರಾಣ ಪುಣ್ಯಕಥೆಗಳು, ರಾಮಾಯಣ ಮಹಾಭಾರತ, ಭಾಗವತಾದಿ ಗ್ರಂಥಗಳಲ್ಲಿ ಕಂಡುಬರುವ ತತ್ತ್ವ ಪ್ರಮೇಯಗಳನ್ನು ಹರಿದಾಸರು ಮೊದಲು ತಾವು ತಮ್ಮ ಗುರುವಿನ ಅನುಗ್ರಹದಿಂದ ಜೀರ್ಣಿಸಿಕೊಂಡು, ನೀತಿ ಬೋಧಪ್ರದವಾದ ತತ್ತ್ವದರ್ಶನವನ್ನು ತಮ್ಮ ಕೀರ್ತನೆ, ಸುಳಾದಿ ಉಗಾಭೋಗಗಳಲ್ಲಿ ಅಳವಡಿಸಿ, ವಿಪುಲವಾದ ಕನ್ನಡಸಾಹಿತ್ಯವನ್ನು ಹೆಚ್ಚಾಗಿ ರಚಿಸಿದವರು ರಾಯಚೂರಜಿಲ್ಲೆಯ ಹರಿದಾಸರೆಂದರೆ ಅತ್ಯುಕ್ತಿಯಾಗಲಿಕ್ಕಿಲ್ಲ!

ದಾಸಚತುಷ್ಟಯದಲ್ಲಿ ಹೆಸರುವಾಸಿಯಾದ ಕವಿಕುಲ ತಿಲಕರಾದ 'ಹರಿಕಥಾಮೃತಸಾರ' ವಕ್ತಾರರಾದ ಮಾನವಿ ಜಗನ್ನಾಥದಾಸರ ಪ್ರಾಣಪದಕರಾಗಿದ್ದ ಲಿಂಗಸೂಗೂರಿನ ಪ್ರಾಣೇಶದಾಸರಿಗೆ ಲೌಕಿಕ ಪಾರಮಾರ್ಥಿಕವೆರಡರಲ್ಲಿಯೂ ಸಂಬಂಧಿಕರಾದವರು ನಮ್ಮ ಕಥಾನಾಯಕರಾದ ವರದೇಶದಾಸರು. ಲಿಂಗಸೂಗೂರಿನಿಂದ ಸುಮಾರು ಐದು ಮೈಲು ದೂರದಲ್ಲಿರುವ ಸಂತೆಕೆಲೂರೆಂಬ ಗ್ರಾಮ. ಆ ಗ್ರಾಮದ ಕರಣಿಕ ಬಂಧುವರ್ಗಕ್ಕೆ ಸೇರಿದ ಹನುಮಂತರಾವ–ತಂಗಮ್ಮ ದಂಪತಿಗಳಲ್ಲಿ ವರದೇಂದ್ರರು ಶಾಲಿವಾಹನ ಶಕೆ ೧೮೦೭ ರಲ್ಲಿ ಜನ್ಮವೆತ್ತಿದರು. ಶ್ರೀ ವರದೇಂದ್ರಸ್ವಾಮಿಗಳ ಅನುಗ್ರಹದಿಂದ ಪುತ್ರಸಂತಾನವಾಗಿದ್ದಕ್ಕೆ ತಂದೆ ತಾಯಿಗಳು ಇವರಿಗೆ "ಸ್ವಾಮಿ" ಎಂದು ನಾಮಕರಣ ಮಾಡಿದರು.

ಚಿಕ್ಕಂದಿನಲ್ಲಿಯೇ ಸದ್ಗುಣಗಳ ಖನಿಯಾಗಿದ್ದ ಸ್ವಾಮಿಗೆ, ಇನ್ನೂ ಮೂರು ವರ್ಷ ತುಂಬಿದಾಗಲೇ ಮಾತೃವಿಯೋಗವಾಗಿದ್ದಕ್ಕೆ, ಸೋದರ ಮಾವಂದಿರಾದ ಶ್ರೀರಾಮಣ್ಣನವರಲ್ಲಿ ಉಪನಯನ, ವಿದ್ಯಾಭ್ಯಾಸ ನೆರವೇರಿತು. ಜನ್ಮಾಂತರದ ಸುಕೃತದ ಫಲ, ಹರಿವಾಯು ಗುರುಗಳ ಅನುಗ್ರಹದಿಂದಾಗಿ, ಅಭ್ಯಾಸದಲ್ಲಿ ಪ್ರಗತಿಯನ್ನು ಸಾಧಿಸುತ್ತ, ವಕೀಲಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಲೌಕಿಕ ಪಾರಮಾರ್ಥಿಕ ಜ್ಞಾನವೆರಡರಲ್ಲಿಯೂ ನಿಷ್ಣಾತರಾಗಿ ಸ್ವಾಮಿರಾಯರೆಂಬ ಹೆಸರಿನಿಂದ ಪ್ರಖ್ಯಾತರಾದರು. ವೃತ್ತಿಯಿಂದ ವಕೀಲರಾಗಿದ್ದರೂ, ಸದಾ ಪಾರಮಾರ್ಥಿಕದೆಡೆಗೆ ಇವರಿಗೆ ವಿಶೇಷ ಒಲವಿತ್ತು. ಇವರು ತಮ್ಮ ವೃತ್ತಿಯಲ್ಲಿ ಮಾತ್ರ ಸತ್ಯಮಾರ್ಗವನ್ನೇ ಅನುಸರಿಸಿ ನ್ಯಾಯ ನಿಷ್ಠುರತೆಯಿಂದ ನಡೆದಂತಹ ನಿಜವಾದ ನ್ಯಾಯವಾದಿಗಳಾಗಿದ್ದರು. ತಮ್ಮ ಆತ್ಮಬಲದಿಂದ ನ್ಯಾಯಾಧೀಶರ ಮನವನ್ನು ಸಹ ಗೆದ್ದುಕೊಂಡಿದ್ದರು. ದುಡ್ಡಿನ ವ್ಯಾಮೋಹಕ್ಕೆ ಸಿಲುಕಿ ಸುಳ್ಳು ಸಾಕ್ಷಿ ಹೇಳಿಸಿ ತಮ್ಮತನವನ್ನೆಂದಿಗೂ ಇವರು ಕಳೆದುಕೊಳ್ಳಲಿಲ್ಲ.

ಗೋರೆಬಾಳಿನ ಕುಲಕರ್ಣಿ ಕುಪ್ಪಣ್ಣನವರ ಸುಪುತ್ರಿ ವೃಂದಾವನಿಬಾಯಿಯೊಂದಿಗೆ ವಿವಾಹವಾದ ಮೇಲೆ ಇವರಿಗೆ ಒಂದು ಗಂಡು ಮಗು ಜನಿಸಿತು. ಆದರೆ ಕೆಲವೇ ದಿನಗಳಲ್ಲಿ ವಿಧಿವಶವಾಯ್ತು. "ಸತಿ ಸುತರು ಹಿತರು ಎಂದು ಮತಿಯಗೆಟ್ಟು ತಿರುಗಬೇಡ" ಎನ್ನುವ ದಾಸ ಶ್ರೇಷ್ಠರ ವಾಣಿಯನ್ನು ಅರ್ಥಮಾಡಿಕೊಂಡ ಸ್ವಾಮಿರಾಯರ ಮನಃಪರಿವರ್ತನೆಯಾಗಿ, ಸದಾ ಮನವು ಶ್ರೀಹರಿಯ ಕಡೆಗೆ ಹರಿಯತೊಡಗಿತು. ಸಂಸಾರದಲ್ಲಿ ವಿರಕ್ತಿ, ಶ್ರೀಹರಿಯಲ್ಲಿ ರತಿ ಹುಟ್ಟಿ ಗುರ್ವಾನುಗ್ರಹಕ್ಕಾಗಿ ಮನವು ಹಂಬಲಿಸಿತು.

ಶ್ರೀ ಮನ್ಮಂತ್ರಾಲಯ ಪ್ರಭುಗಳ ದರ್ಶನಕ್ಕೆಂದು ತಮ್ಮ ಬಾಲ್ಯಸ್ನೇಹಿತರೊಡನೆ ಹೋಗಿ ಹಿಂದಿರುಗುವಾಗ, ಅಣು ಮಂತ್ರಾಲಯ (ಈಗಿನ ಮಂತ್ರಾಲಯಂರೋಡ್)ದಲ್ಲಿ ಶ್ರೀ ಮದಕ್ಷೋಭ್ಯತೀರ್ಥ ಮಠಾಧೀಶ್ವರರಾದ ಶ್ರೀ ಮದ್ರಘುಕಾಂತತೀರ್ಥರು, ಮತ್ತು ಶ್ರೀರಘುದಾಂತ ತೀರ್ಥರ ದಿವ್ಯದರ್ಶನವಾಯಿತು. ಅಂದು ಹರಿದಿನದ ಜಾಗರಣೆ,ಭಜನೆ ಉಭಯಶ್ರೀಗಳವರ ಉಪದೇಶಾಮೃತದಿಂದ ಇವರಿಗೆ ಹೊಸಜೀವನ ಪ್ರಾಪ್ತವಾಯಿತು. ಮನಸ್ಸು ಪರಿಪಕ್ವವಾಯಿತು.

ಶ್ರೀ ಗೋಪಾಲದಾಸರ ಶಿಷ್ಯಪರಂಪರೆಯಲ್ಲಿ ಬರುವ ಶ್ರೀ ಕೋಸಗಿಯ ಗುರು ಜಗನ್ನಾಥದಾಸರಿಗೆ ಸ್ವಪ್ನದಲ್ಲಿ ಸೂಚನೆಯಾಗಿ ಸ್ವಾಮಿರಾಯರನ್ನು ಅನುಗ್ರಹಿಸಿ ಅಂಕಿತಕೊಡುತ್ತೇವೆಂದು ಬಂದಾಗ – "ತಮಗೆ ಅಂಕಿತಕೊಡಲು ಸೂಚನೆಯಾದಂತೆ, ನನಗೆ ಅಂಕಿತ ತೆಗೆದುಕೊಳ್ಳಲು ಶ್ರೀ ಹರಿಯಿಂದ ಸೂಚನೆ ಆಗಿಲ್ಲ" ಎಂದು ಸ್ವಾಮಿರಾಯರು ಉತ್ತರಿಸಿದರು. ಶ್ರೀ




ಹರಿಯ ಆದೇಶದಂತೆ ಅಪ್ಪಣೆಯಾಗಲು ಸ್ವಾಮಿರಾಯರೇ ಕೋಸಗಿಗೆ ಹೋಗಿ. ಶ್ರೀ ಗುರುಜಗನ್ನಾಥದಾಸರಿಂದ ವಿಧಿವತ್ತಾಗಿ "ವರದೇಶವಿಠಲ" ಎಂಬ ಅಂಕಿತ ಪಡೆದು ವರದೇಶದಾಸರಾದರು.

ಭಕ್ತಿಮಾರ್ಗದಲ್ಲಿ ಹೊಸಜನ್ಮವನ್ನು ಕೊಟ್ಟು ತತ್ತ್ವೋಪದೇಶ ಮಾಡಿದ ತಮ್ಮ ಗುರುಗಳನ್ನು– "ಗುರುವೆ ನೀನೊಲಿದು ಪಾಮರತರನಾದೆನ್ನ। ಹರುಷದಿ ಕರ ಪಿಡಿದು | ಪರಮಕರುಣದಿಂದ ಹರಿದಾಸ್ಯವಿತ್ತು ಉ। ದ್ಧರಿಸಿದ ಉಪಕಾರ ಮರೆಯಲಾರೆನು ಎಂದೂ।", ಎಂಬುದಾಗಿ ಸ್ತೋತ್ರಗೈಯುತ್ತಾ, "ಬರಿದೆ ಬಾಹ್ಯಾಚಾರ ವಿರಚಿಸದಲೆ ಮನದಿ। ಹರಿರೂಪ ಕಾಂಬ ತೆರದಿ। ವರದೇಶ ವಿಠ್ಠಲನ,ಸಿರಿದಾಸ್ಯ ತನವೆಂಬ ಗುರುತು ತೋರುವುದಯ್ಯ ಗುರುಜಗನ್ನಾಥಾರ್ಯ," ಎಂದು ಬಹುಪರಿಯಿಂದ ತಮ್ಮ ಗುರುಗಳನ್ನು ಸ್ತುತಿಗೈದರು.

ಶ್ರೀ ವರದೇಶದಾಸರು ಲಿಂಗಸೂಗೂರಿಗೆ ಮರಳಿ ಬಂದ ಮೇಲೆ ದಿನ ನಿತ್ಯ ಹರಿನಾಮ ಸಂಕೀರ್ತನೆಯಲ್ಲಿ ಕಾಲಕಳೆಯುವುದು, ಹರಿಕಥಾ

(23 ನೇ ಪುಟ ನೋಡಿ)

**ಶ್ರೀ ಪ್ರಹ್ಲಾದಾಚಾರ್ಯ ಜೋಶಿ**

# ತಂತ್ರಸಾರ

ರಾಗ=ಸಾವೇರಿ ತಾಳ=ಝಂಪೆ

ಪಾಹಿ ಪಂಕೇರುಹೇಕ್ಷಣ ಸರ್ವಕಾಮದಾ
ಪಾಹಿ ಪದ್ಮಾಲಯ ನಿಕೇತನ ಸದಾ ॥ಪಲ್ಲ॥

ಜಯತು ಚತುರಾನನ ಭವೇಂದ್ರಾದಿ ವಿಬುಧನುತ
ಜಯತು ಚತುರಾನನ ರಮಾವಲ್ಲಭಾ ॥
ಜಯತು ಸುಖಪೂರ್ಣ ಚಿತ್ಸುಖಮುಖ ಸುಗುಣನಿಲಯ ।
ಜಯತು ಜನ್ಮಾದಿಕಾರಣ ದೋಷಹ ॥೧॥

ಕಮಲಾಕ್ಷ ಪರಮಸಂಭ್ರಮದಿಂದ ಲಕ್ಷ್ಮೀಕರ
ಕಮಲದಿಂ ಸೇವೆಗೊಳುತಿರಲು ಆಗ
ಅಮರ ನಿಕರಾರಾಧ್ಯ ಕಮಲಾಸನನು ಬಂದು
ನಮಿಸಿ ಬಿನ್ನೈಸಿದನು ತನ್ನ ಪಿತಗೆ ॥೨॥

ಆವ ಸರ್ವೋತ್ತಮನು ಆವಾವಗುಣಗಳಹ್ಯ–
ವಾವಾವ ಶಬ್ದವಾಚ್ಯಾವರೀತಿ
ಈ ವಿಚಾರವನು ಪೇಳೆನಲು ನಸುನಗುತ ರಾ–
ಜೀವ ಸಂಭವಗೆ ಇಂತೆಂದು ನುಡಿದ

ವನಜ ಸಂಭವಕೇಳು ನಾನೆ ಸರ್ವೋತ್ತಮನು
ಎನಗನಂತಾನಂತ ಮಂಗಳಗುಣ ॥
ಪ್ರಣವವಾಚ್ಯನು ನಾನೆ ಅಷ್ಟವರಣೋಪೇತ
ಪ್ರಣವವಿಚಾರವನು ಪೇಳ್ವೆ ನಿನಗೆ ॥೪॥

ಸಾದರದಿ ಕೇಳಿನ್ನಕಾರುಕಾರ ಮಕಾರ –
ನಾದ ಬಿಂದು ಘೋಷ ಶಾಂತತಿಶಾಂತವು ।
ಈ ದಿವ್ಯವರ್ಣದಲಿ ವಿಶ್ವತೈಜಸ ಪ್ರಾಜ್ಞ –
ವೋದ ಮಯತುರ್ಯಾತ್ಮ ಅಂತರಾತ್ಮ ॥

ಪರಮಾತ್ಮ ಜ್ಞಾನಾತ್ಮಯೆಂಬಷ್ಟರೂಪದಿಂ ।
ದಿರುತಿಹನು ವೇದಾದಿಯಲಿ ಸರ್ವದ
ಪರಮ ಋಷಿಗಳು ಈ ಮಹಾಮಂತ್ರ ಜಪಿಸೆನ್ನ
ಪುರವನೈದಿದರೋ ಸತ್ವರದಿಂದಲಿ ॥೬॥

ವಾರಿರುಹ ಸಂಭವನೆ ಕೇಳಕಾರದಲಿ ಹದಿ–
ನಾರು ಅಚ್ಚುಗಳು ಜನಿಸಿದವೊ ಕ್ರಮದಿ ।
ಚಾರು ಅಜ ಆನಂದ ಇಂದ್ರೇಶಮೊದಲಾದ–
ಈರೆಂಟುರೂಪಗಳು ವಿಶ್ವಜನಿತ ॥

ಉಮನಾದ ಬಿಂದು ಘೋಷಗಳಿಂದ ಕ. ಚ ಟ ತ ಪ
ವಿಮಲ ವರ್ಗಗಳು ಪುಟ್ಟಿದವು ಇದು ॥

ಕಮಲಸಂಭವ ಕೇಳು ತೈಜಸಪ್ರಾಜ್ಞ ತುರ್ಯ ಆ
ತುಮ ಅಂತರಾತ್ಮ ಮೂರ್ತಿಗಳಿಂದಲಿ ॥೮॥
ಪಂಚವಿಂಶತಿ ರೂಪ ಅಭಿವ್ಯಕ್ತವಾದವು ವಿ–
ರಿಂಚಿಕೇಳ್ ಶಾಂತದಿಂ ಯರಲ ವಗಳು ।
ಸಂಚಿಂತಿಸ್ಯತಿಶಾಂತದಿ ಶಷಸಹಳ–ಪಂಚಾಕ್ಷರ
ಗಳು ಜನಿಸಿದವೊಯಿಲ್ಲಿ ॥

ಪರಮಾತ್ಮಜ್ಞಾನಾತ್ಮ ರೂಪದಿಂದೊಂಭತ್ತು।
ನಿರುಪಮ ಸ್ವಮೂರ್ತಿಗಳು ಶೋಭಿಸಿದವು ॥
ಪರಮೇಷ್ಠಿ ನಾರಾಯಣಷ್ಟಾಕ್ಷರ ಮಂತ್ರ ।
ಒರೆವೆ ನಿನಗಾನು ಸಾಂಗೋಪಾಂಗದಿಂ ॥
॥೧೦॥

ತಾರಗತ ಅಷ್ಟವರ್ಣಗಳಿಂದ ಓಂ ನಮೋ–
ನಾರಾಯಣಾಯ ಯೆಂಬೀ ಮಂತ್ರವು ।
ಚಾರು ಅಷ್ಟಾರ್ಣ ತದ್ವಾಚ್ಯಮೂರ್ತಿಗಳೆಂಟು–
ಸಾರವಿಶ್ವಾದಿ ಪ್ರಣವಸ್ಥ ಭಿನ್ನ ॥
ಓಂಭೂಃ ಓಂಭುವಃ ಓಂಸ್ವಹ :
ಓಂಭೂರ್ಭುವ ಸುವಹ ಈ ವ್ಯಾಹೃತೀ ॥
ಅಂಬುಜೋದ್ಭವ ಪ್ರಣವಾದಿನಾಲ್ವರಣದಿಂ–
ಸಂಭವಿಸಿತೀಮಂತ್ರ ಸುಲಭದಿಂದ ॥

ತನಯ ಕೇಳೀಮಂತ್ರಗತ ನಾಲ್ಕುರೂಪಗಳು
ಅನಿರುದ್ಧ ಪ್ರದ್ಯುಮ್ನ ಸಂಕರುಷಣ ॥
ಅನಘ ಶ್ರೀವಾಸುದೇವನ ಮೂರ್ತಿಗಳು ಚಿಂ–
ತನೆ ಮಾಡೋ ಈವ್ಯಾಹೃತಿಯಲಿ ಬಿಡದೆ
॥೧೩॥

ನಿಗಮಾದಿ ಮೊದಲು ನಾಲ್ವರ್ಣದಿಂ ಓಂ ನಮೋ
ಭಗವತೇ ವಾಸುದೇವಾಯಯೆಂಬಾ ॥
ಯುಗಳ ಆರಕ್ಷರಾತ್ಮಕ ಮಂತ್ರಪ್ರತಿಪಾದ್ಯ–
ಭಗವದ್ರೂಪಗಳ ಪೇಳುವೆ ನಿನಗೆ ಕೇಳು ॥

ಕೇಶವ ನಾರಾಯಣನು ಮಾಧವನು ಗೋವಿಂದ ।
ಕ್ಲೇಶನಾಶನ ವಿಷ್ಣು ಮಧುಸೂಧನ ।
ಶ್ರೀತ್ರಿವಿಕ್ರಮನು ವಾಮನ ಶ್ರೀಧರ ಹೃಷೀ–
ಕೇಶಾಂಬುರುಹನಾಭ ದಾಮೋದರ ॥೧೫॥

ತೃತೀಯ ಆವರ್ತಿ ಅಷ್ಟಾವರ್ಣದಿಂ ಮೂರುವ್ಯಾ–
ಹೃತಿಯಿಂದ ದ್ವಿಪದಕ್ಷರ ಯೆರಡರಿಂದ

ಚತುರಾಸ್ಯಕೇಳು ಗಾಯತ್ರಿ ಉತ್ಪನ್ನವಾ–
ಯಿತು ಕೇಶವಾದಿ ಕೃಷ್ಣಾಂತರೂಪ ॥

ವಿತತವಾದವು ಪುರುಷಸೂಕ್ತಗಾಯತ್ರಿಯಿಂ
ದತುಳ ಈ ಪುರುಷ ಸೂಕ್ತದಲಿ ವೇದ ॥
ತತಿಗಳುದಿಸಿದವು ನಿಗಮಾದಿಬ್ರಹ್ಮಸೂತ್ರ ಭಾ
ರತ ಪಂಚರಾತ್ರಾದಿ ಆಗಮಗಳು ॥೧೭॥

ಶತಕೋಟಿಮೂಲರಾಮಾಯಣ ಪುರಾಣಗಳು–
ಸ್ಮೃತಿಸಮೂಹಗಳುಪಪುರಾಣಗಳು ।
ಇತರವೇದೋಕ್ತ ಸುಶಬ್ದ ಜನಿಸಿದವು ಸಂ–
ತತವಾಚ್ಯ ನಾನೇ ಸಂದೇಹವಿಲ್ಲ ॥ ॥೧೮॥

ಉದಯಿಸುವ ರವಿಯುವೋಲ್ ಕಾಂತಿ ಜ್ಞಾನಾನಂದ
ಮುದಮೋಹ ದಿವ್ಯಗುಣಮಯಶರೀರ
ಸುದರುಶನದರ ಗದಾಂಬುಜಗಳಾಯುಧ ವೆನಗೆ ।
ತ್ರಿದಶ ಗಣಮಯನು ಸರ್ವೇಶ ನಾನು ॥೧೯॥

ಇದ್ದೈಸೆಯಲೆನ್ನ ಸೇವಿಪರು ಶ್ರೀಭೂದೇವಿ
ಕೃದ್ಧೋಲ್ಕ ವಿಶ್ವಕೇಶವ ಮತ್ಸ್ಯಾದಿ
ಮದ್ರೂಪಗಣಮಧ್ಯಗನು ನಾನು ಬ್ರಹ್ಮ ಫಣಿ ।
ಪಾದ್ಯರತಿ ಭಕ್ತಿಸೇವ್ಯನು ಸಮರ್ಥ ॥೨೦॥

ಅರಿದರ ವರಾಭಯಾಂಕಿತ ಚತುರ್ಭುಜನು ನಾ ।
ಲ್ಕೆರಡು ರೂಪಂಗಳು ಪ್ರದೀಪವರ್ಣಾ ॥
ಸಮವಾಭರಣ ಭೂಷಿತವಾದ ಮದ್ರೂಪ ।
ನಿರುತಮೇಯುವು ಮುಮುಕ್ಷುಗಳಿಂದಲಿ ॥೨೧॥

ತಾರನಾರಾಯಣಾಷ್ಟಾಕ್ಷರವು ವ್ಯಾಹೃತಿಯು।
ಈರಾರುವರ್ಣ ಗಾಯತ್ರಿಮಂತ್ರ ॥
ಸಾರಮಾತೃಕ ಪುರುಷಸೂಕ್ತ ವೈಷ್ಣವಗಳಿವು।
ನೀರಜಾಸನ ಕೇಳು ಮಹಾಮಂತ್ರವೋ
॥೨೨॥

ಸೀತಾರಮಣ ಮೂಲರಾಮನತಿ ಹರುಷದಿ ವಿ–
ಧಾತಗುಪದೇಶಿಸಿದ ಯೀ ತೆರದಲಿ ॥
ಪ್ರೀತಿಯಿಂದಲಿ ನಿರಂತರದಲಿ ಯಿದಪಠಿಸೆ ಶೇ–
ಷಾತಪತ್ರನು ಕಾಮಿತಾರ್ಥವೀವ

ಬ್ಯಾಗವಾಟದ ರಂಗವೊಲಿದ ಶ್ರೀನರಸಿಂಹ
ಭಾಗವತರಣುಗ ಶ್ರೀಜಗನ್ನಾಥದಾಸ
ಬಾಗಿ ವಿಜ್ಞಾಪಿಸಲು ಕೈಕೊಂಡು ಪರಮಾನು।
ರಾಗದಲಿ ಪೇಳಿದೆವು ತಂತ್ರಸಾರ ॥೨೪॥

(28 ನೇ ಪುಟ ನೋಡಿ)

# ಶ್ರೀ ಅನಂತ ಪದ್ಮನಾಭವ್ರತ

— ಶ್ರೀನಿವಾಸಮಠದ

"ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಉಪನಿಷದ್ವಾಣಿಯಂತೆ ವೇದ ಪ್ರತಿಪಾದ್ಯನೂ, ಅನಂತಶಯನನೂ, ಹಾಗೂ ಅನಂತರೂಪಗಳುಳ್ಳವನೂ ಆದ "ಶ್ರೀ ಅನಂತಪದ್ಮನಾಭ"ನನ್ನು ಪ್ರತಿವರುಷ ಭಾದ್ರಪದಮಾಸ ಶುಕ್ಲ ಚತುರ್ದಶೀ ದಿನದಂದು ಸರ್ವರೂ ಪೂಜಿಸುವವರಾಗಬೇಕು. ಈ ಉತ್ತಮವಾದ ವ್ರತವನ್ನು 14 ವರ್ಷಗಳವರೆಗೆ ಮಾಡಿ ಅನಂತರದಲ್ಲಿ ಉದ್ಯಾಪನೆ ಮಾಡಬೇಕು. ಇದರಿಂದ ಸಕಲ ಅನಿಷ್ಟಗಳೂ ಪರಿಹಾರವಾಗಿ ಧನ, ಧಾನ್ಯ, ಸಂಪತ್ತು, ಪುತ್ರ ಪೌತ್ರಾದಿಗಳ ಅಭಿವೃದ್ಧಿ ಉಂಟಾಗುತ್ತದೆ. ಈ ವ್ರತವನ್ನು ಧರ್ಮರಾಜನು ಆಚರಿಸಿದ ಬಗ್ಗೆ ಶ್ರೀ ಭವಿಷ್ಯೋತ್ತರ ಪುರಾಣದಲ್ಲಿ ಒಂದು ಆಖ್ಯಾನ ಉಂಟು, ಅದು ಹೀಗಿದೆ—

ಧರ್ಮದಲ್ಲಿ ಆಸಕ್ತನಾದ ಧರ್ಮರಾಜನು 'ರಾಜಸೂಯ' ಯಜ್ಞವನ್ನು ಮಾಡಲು ಉಪಕ್ರಮಿಸಿದನು. ಯಜ್ಞಕ್ಕಾಗಿ ಅನೇಕ ರತ್ನಗಳಿಂದ ಅಲಂಕರಿಸಲ್ಪಟ್ಟ, ಮುತ್ತುಗಳಿಂದ ಹೆಣೆದ ಇಂದ್ರದೇವರ ಅರಮನೆಗೆ ಸಮವಾದ ಕಾಂತಿಯುಳ್ಳ ಯಜ್ಞಶಾಲೆಯನ್ನು ಮಾಡಿಸಿದನು. ಶ್ರೀ ಕೃಷ್ಣನಿಂದಲೂ, ಭೀಮಾರ್ಜುನರಿಂದಲೂ ಕೂಡಿದ - ಧರ್ಮರಾಜನು ಯಜ್ಞಕ್ಕೆ ಸಕಲ ರಾಜರನ್ನು ಕರೆಸಿದನು. ಆಗ ಗಾಂಧಾರಿಯ ಮಗನಾದ ದುರ್ಯೋಧನನೂ ಆ ಯಜ್ಞಶಾಲೆಗೆ ಬಂದನು. ಅಲ್ಲಿ ರತ್ನಗಳ ಕಾಂತಿಯಿಂದ ನೀರಿನಂತೆ ಕಾಣುವ ಅಂಗಣವನ್ನು ಕಂಡು ನೀರೆಂದು ಭಾವಿಸಿ (ಭ್ರಮಿಸಿ) ತನ್ನ ವಸ್ತ್ರಗಳನ್ನು ಮೇಲಕ್ಕೆತ್ತಿಕೊಂಡು ಮೆಲ್ಲ ಮೆಲ್ಲನೆ ನಡೆದನು. ಹೀಗೆ ನಡೆಯುತ್ತಿರುವ ಆತನನ್ನು ದ್ರೌಪದಿಯೇ ಮೊದಲಾದ ಉತ್ತಮ ಸ್ತ್ರೀಯರು ಕಂಡು ಮುಖದಲ್ಲಿ ಕಿರುನಗೆ ಧರಿಸಿದರು. ಆಮೇಲೆ ದುರ್ಯೋಧನನು ಮುಂದೆ ಹೋಗುತ್ತ ನೀರನ್ನು ನೆಲದಂತೆ ಕಾಣುತ್ತ ನಡೆದು ನೀರಲ್ಲಿ ಬಿದ್ದುಬಿಟ್ಟನು. ಕೂಡಲೇ ಸಕಲರಾಜರೂ, ತಪಸ್ವಿಗಳೂ, ದ್ರೌಪದಿಯೇ ಮೊದಲಾದ ಹೆಣ್ಣುಮಕ್ಕಳೂ ಖೊಳ್ಳೆಂದು ನಕ್ಕರು. ಇದರಿಂದ ರಾಜನಾದ ದುರ್ಯೋಧನನಿಗೆ ಅತಿಯಾದ ಸಿಟ್ಟು ಬಂದಿತು. ತನ್ನ ಮಾವನಾದ ಶಕುನಿಯೊಡನೆ ಮಾತಾಡಿ ತನ್ನ ರಾಜ್ಯಕ್ಕೆ ಹಿಂತಿರುಗಲು ಯೋಚಿಸಿದನು. ಆ ಸಮಯದಲ್ಲಿ ಶಕುನಿಯು ಮೆಲ್ಲನೆಯ ಮಾತುಗಳಿಂದ ಸಮಾಧಾನ ಮಾಡುತ್ತಾ–'ಅರಸನೇ ಮುಂದಿನ ಕೆಲಸದ ಗೌರವ ದೆಶೆಯಿಂದ ಈ ಮಹಾಕ್ರೋಧವನ್ನು ತ್ಯಜಿಸು. ಪಗಡೆಯಾಟದ ಆರಂಭದಿಂದಲೇ ಸಕಲರಾಜ್ಯವನ್ನು ಪಡೆಯುವೆ' ಎಂಬುದಾಗಿ ಹೇಳಿದನು. ಈ ಮಾತಿನಿಂದ ದುರ್ಯೋಧನನಿಗೆ ಸ್ವಲ್ಪ ನೆಮ್ಮದಿ ಉಂಟಾಯಿತು. ಯಜ್ಞವು ಸಾಂಗವಾಗಿ ನೆರವೇರಿತು. ಅರಸರೆಲ್ಲರೂ ತಮ್ಮ ತಮ್ಮ ಪಟ್ಟಣಗಳಿಗೆ ತೆರಳಿದರು. ಆಮೇಲೆ ದುರ್ಯೋಧನನು ಮಾವನೊಡನೆ ಮೊದಲೇ ನಿರ್ಣಯಿಸಿದಂತೆ, ಶ್ರೇಷ್ಠರೂ ಪಾಂಡುರಾಜನ ಮಕ್ಕಳೂ ಆದ ಧರ್ಮರಾಜ, ಭೀಮಾರ್ಜುನರನ್ನು ಕರೆದುಕೊಂಡು ಹಸ್ತಿನಾವತಿ ಪಟ್ಟಣವನ್ನು ಸೇರಿದನು. ಪಗಡೆ ಆಟಕ್ಕೆ ಅವರನ್ನು ಹುರಿದುಂಬಿಸಿ, ಶಕುನಿಯ ಸಹಾಯದಿಂದ ಅವರ ರಾಜ್ಯವನ್ನೆಲ್ಲ ಪಡೆದು, ನಿರ್ದೋಷಿಗಳಾದ ಪಾಂಡವರೆಲ್ಲರನ್ನು ಸೋಲಿಸಿ ವನವಾಸಕ್ಕೆ ಕಳಿಸಿಬಿಟ್ಟನು.

ನಂತರ ಜಗತ್ತಿಗೆ ಪ್ರಭುವಾದ ಶ್ರೀ ಕೃಷ್ಣನು ಈ ವಾರ್ತೆಯನ್ನು ಕೇಳಿ ಧರ್ಮರಾಜನನ್ನು ನೋಡಲು ಅಪೇಕ್ಷಿಸಿ ವನಕ್ಕೆ ತೆರಳಿದನು. ದುಃಖಿತನಾದ ಧರ್ಮರಾಜನು ಮಹಾತ್ಮನಾದ ಶ್ರೀಕೃಷ್ಣನನ್ನು ನೋಡಿ ನಮಸ್ಕರಿಸಿದನು, ಮತ್ತು "ತಮ್ಮಂದಿರಿಂದ ಕೂಡಿದ ನಾನು ಈ ಭೂಮಿಯಲ್ಲಿ ದುಃಖಿತನಾಗಿದ್ದೇನೆ. ಕೊನೆಯಿಲ್ಲದ ಈ ಶೋಕ ಸಾಗರದಿಂದ ಹೇಗೆ ಮೋಕ್ಷವು ಪ್ರಾಪ್ತವಾಗುವುದು?" ಎಂದು ಕೇಳಿಕೊಂಡನು.

ಶ್ರೀಕೃಷ್ಣನು ಧರ್ಮರಾಜನೇ! "ಅನಂತ ವ್ರತ" ವೆಂಬ ಉತ್ತಮವಾದ ವ್ರತವು ಸ್ತ್ರೀ ಪುರುಷರ ಸಕಲ ಪಾಪವನ್ನು ಪರಿಹರಿಸುವುದಲ್ಲದೆ ಸರ್ವ ಇಷ್ಟವನ್ನು ಕೊಡುವುದಾಗಿದೆ ಮತ್ತು ಭಾದ್ರಪದಮಾಸ ಶುಕ್ಲ-ಚತುರ್ದಶೀ ದಿನದಲ್ಲಿ ಆ ವ್ರತವನ್ನು ಆಚರಿಸಿದ ಮಾತ್ರದಿಂದ ಧನ, ಧಾನ್ಯ. ಸಂಪತ್ತು ಎಲ್ಲವೂ ಲಭಿಸುವುದು ಎಂಬುದಾಗಿ ಉಪದೇಶಿಸಿದನು.

ಅದಕ್ಕೆ ಧರ್ಮರಾಜನು 'ಅನಂತನೆಂದರೆ ಯಾರು? ಆ ವ್ರತವು ಹೇಗೆ ಆಚರಿಸಲ್ಪಡುತ್ತದೆ ಎಂಬುದನ್ನು ಸವಿಸ್ತಾರವಾಗಿ ತಿಳಿಸಬೇಕೆ'ಂದು ವಿಜ್ಞಾಪಿಸಿಕೊಂಡನು.

ಶ್ರೀಕೃಷ್ಣನು ಹೇಳುತ್ತಾನೆ- "ಅನಂತನೆಂದರೆ ನಾನೇ ಆಗಿದ್ದೇನೆ. ಆ ಅನಂತ ಸ್ವರೂಪವು ನನ್ನದೇ ಆಗಿದೆ. ಅನಂತರೂಪಿಯಾದ ನಾನು ಭೂಭಾರಭೂತರಾದ ದೈತ್ಯರ ಸಂಹಾರಕ್ಕಾಗಿ ಈ ಭೂಮಿಯಲ್ಲಿ ಕೃಷ್ಣನಾಗಿ ಅವತರಿಸಿದ್ದೇನೆ." ಮತ್ತು ಆ ವ್ರತದ ಇತಿಹಾಸವು ಹೀಗಿದೆ-

ಹಿಂದಕ್ಕೆ ಕೃತಯುಗದಲ್ಲಿ ಸುಮಂತು ಎಂಬ ಬ್ರಾಹ್ಮಣನಿದ್ದನು, ಆತನು ವಸಿಷ್ಠ ಗೋತ್ರದಲ್ಲಿ ಹುಟ್ಟಿದ ಭೃಗು ವೆಂಬ ಬ್ರಾಹ್ಮಣನ ಮಗಳಾದ ಸುಂದರಿಯಾದ ದೀಕ್ಷೆಯೆಂಬ ಕನ್ನಿಕೆಯನ್ನು ಮದುವೆ ಮಾಡಿಕೊಂಡನು. ಕೆಲವು ಕಾಲದ ಮೇಲೆ ಅವಳಿಗೆ ಉತ್ತಮಳಾದ ಶೀಲೆ' ಎಂಬ ಮಗಳು ಹುಟ್ಟಿದಳು. ಆಕೆಯು ಪತಿವ್ರತೆಯಾದ ತಾಯಿಯು ಜ್ವರತಾಪದಿಂದ ಸ್ವಲ್ಪೇ ದಿನಗಳಲ್ಲಿ ಮರಣ ಹೊಂದಿ ಸ್ವರ್ಗಕ್ಕೆ ತೆರಳಿದಳು. ಆಮೇಲೆ ಸುಮಂತುವಾದರೂ ಧರ್ಮದಲ್ಲೇ ಆಸಕ್ತನಾದ ಬ್ರಾಹ್ಮಣನ ಮಗಳಾದ ಕರ್ಕಶೆಯೆಂಬ ಬೇರೊಬ್ಬಳನ್ನು ಮದುವೆ ಮಾಡಿಕೊಂಡನು. ಇವಳು ತುಂಬಾ ಕ್ರೂರಳೂ, ಕೋಪಿಷ್ಠಳೂ ಆಗಿದ್ದಳು. ಶೀಲೆಯು ಯೌವನದಲ್ಲಿ ಕಾಲಿಟ್ಟ[illegible]

ವೇದಜ್ಞರಾದವರಲ್ಲಿ ಶ್ರೇಷ್ಠನಾದ, ಕಾಂತಿವಂತನಾದ ಕೌಂಡಿನ್ಯನೆಂಬ ಋಷಿಕುಮಾರನಿಗೆ ಕೊಟ್ಟು ಶುಭ ಮುಹೂರ್ತದಲ್ಲಿ ವಿವಾಹ ನೆರವೇರಿಸಿದನು. ಕೌಂಡಿಣ್ಯನು ಸುಶೀಲೆಯಾದ, ನವವಧುವಾದ ಶೀಲೆಯನ್ನು ಕರೆದುಕೊಂಡು ಎತ್ತಿನ ಬಂಡಿಯಲ್ಲಿ ಪ್ರಯಾಣ ಮಾಡುತ್ತಾ, ಯಮುನಾನದಿಯನ್ನು ಸೇರಿ ಅದರ ದಂಡೆಯ ಮೇಲೆ ಬಂಡಿಯನ್ನು ನಿಲ್ಲಿಸಿ ಮಧ್ಯಾಹ್ನದ ಸ್ನಾನ ಸಂಧ್ಯಾದಿಗಳನ್ನು ಪೂರೈಸಲು ನದಿಗೆ ನಡೆದನು. ಶೀಲೆಯು ಕೂಡ ನದಿಯ ದಡಕ್ಕೆ ಬಂದು ಅಲ್ಲಿ ಕೆಂಪುಬಟ್ಟೆಯುಟ್ಟುಕೊಂಡಿರುವ ಸ್ತ್ರೀಯರ ಗುಂಪನ್ನು ಕಂಡಳು. ಚತುರ್ದಶೀ ದಿನದಲ್ಲಿ ಶ್ರೀಮನ್ನಾರಾಯಣ ದೇವರನ್ನು ಭಕ್ತಿಯಿಂದ ಪೂಜಿಸುತ್ತಿರುವ ಆ ಸ್ತ್ರೀಯರ ಸಮೀಪಕ್ಕೆ ಹೋಗಿ 'ಇದು ಯಾವ ವ್ರತ? ಇದರ ಫಲವೇನು?' ಎಂಬುದಾಗಿ ಪ್ರಶ್ನಿಸಿದಳು.

ಆ ಸ್ತ್ರೀಯರು "ಇದು ಉತ್ತಮವಾದ ಅನಂತ ವ್ರತವು. ಈ ವ್ರತದಲ್ಲಿ ಅನಂತನು ಪೂಜಿಸಲ್ಪಡುತ್ತಾನೆ. ಒಂದು ಸೇರು ಅಕ್ಕಿಯಿಂದ ಪುರುಷನಾಮಕನಾದ ಪರಮಾತ್ಮನ ನಿಮಿತ್ತ ಪಾಕಮಾಡಿ ಅನಂತನಿಗರ್ಪಿಸಿ, ಅರ್ಧವನ್ನು ಬ್ರಾಹ್ಮಣನಿಗೆ ದಾನಮಾಡಿ ಉಳಿದುದನ್ನು ತಾನು ಭೋಜನ ಮಾಡ ಮಾಡಬೇಕು" ಎಂಬುದಾಗಿ ಹೇಳಿದರು. ಶೀಲೆಯು ಪೂಜಾ ವಿಧಾನವನ್ನು ತಿಳಿಸಬೇಕೆಂದು ವಿನಂತಿಸಿಕೊಳ್ಳಲು ಮತ್ತೆ ಅವರು ವಿಸ್ತಾರವಾಗಿ ಹೇಳತೊಡಗಿದರು:

'ನದಿಯ ದಡದಲ್ಲಿ, ದರ್ಭೆಯಿಂದ ಶ್ರೀಶನ ಪ್ರತಿಮೆಯನ್ನು ಮಾಡಿ ಬಿದಿರಿನ ಪಾತ್ರದಲ್ಲಿಟ್ಟು ಸ್ನಾನ ಮಾಡಿ ಮಂಡಲದ ಮೇಲೆ ಗಂಧ ಪುಷ್ಪ ಧೂಪ ದೀಪಗಳಿಂದ, ಅನೇಕ ವಿಧದ ಪಕ್ವಾನ್ನಗಳಿಂದ ಕೂಡಿದ ನೈವೇದ್ಯದಿಂದ ಆ ದೇವನ ಮುಂಭಾಗದಲ್ಲಿ ಕುಂಕುಮದಿಂದ ಕೆಂಪಾದ ದೃಢವಾದ ೧೪ ಗಂಟುಳ್ಳ ದಾರವನ್ನಿಟ್ಟು ಪೂಜಾ ದ್ರವ್ಯಗಳಿಂದ ಪೂಜೆ ಸಲ್ಲಿಸಬೇಕು. ಆ ಮೇಲೆ ಗಂಡಸರು ಬಲಗೈಯಲ್ಲಿ, ಸ್ತ್ರೀಯರು ಎಡಗೈಯಲ್ಲಿ ಈ ದಾರವನ್ನು ಕಟ್ಟಿಕೊಳ್ಳಬೇಕು.

"ಸಂಸಾರವೆಂಬ ಮಹಾ ಸಮುದ್ರದಲ್ಲಿ ಮುಳುಗಿದ ನನ್ನನ್ನು ಎಲೈ ಅನಂತನೇ ಉದ್ಧರಿಸು. ನಾಶವಿಲ್ಲದ ನಿನ್ನ ರೂಪದಲ್ಲಿ ನನ್ನನ್ನು ವಿನಿಯೋಗಿಸು (ಸಾರೂಪ್ಯವೆಂಬ ಮೋಕ್ಷವನ್ನು ನೀಡು). ಅನಂತರೂಪಿಯಾದ ನೀನು ಈ ಸೂತ್ರದಲ್ಲಿ ಸನ್ನಿಹಿತನಾಗಿರುವೆ. ನಿನಗೆ ನಮಸ್ಕಾರ" ಈ ಮಂತ್ರದಿಂದ ದ್ವಾರವನ್ನು ಕಟ್ಟಿಕೊಂಡು ಈ ಅನಂತವ್ರತ ಕಥೆಯನ್ನು ಕೇಳಿ "ಜಗತ್ತಿನಲ್ಲಿ ವ್ಯಾಪ್ತನಾದ ಸ್ವರೂಪವುಳ್ಳ ಶ್ರೀಮನ್ನಾರಾಯಣ ಸ್ವರೂಪಿಯಾದ ಶ್ರೀಅನಂತ ಪದ್ಮನಾಭನನ್ನು ಧ್ಯಾನಿಸಿ ಕಡೆಗೆ ಆ ಪರಮಾತ್ಮನ ಪ್ರಸಾದವನ್ನು ಸ್ವೀಕರಿಸಬೇಕು. ಶಕ್ತ್ಯಾನುಸಾರ ಬ್ರಾಹ್ಮಣರಿಗೆ ದಕ್ಷಿಣೆ ಕೊಡಬೇಕು."

ಇದನ್ನು ಕೇಳಿ ಶೀಲೆಯು ಸಂತುಷ್ಟಳಾಗಿ ತಾನೂ ಈ ವ್ರತವನ್ನೂ ಆಚರಿಸಿ, ತೋಳಿನಲ್ಲಿ ದಾರವನ್ನು ಕಟ್ಟಿಕೊಂಡಳು. ತಂದ ಬುತ್ತಿಯಲ್ಲಿ ಅರ್ಧವನ್ನು ಬ್ರಾಹ್ಮಣನಿಗೆ ಕೊಟ್ಟು ಆ ಮೇಲೆ ತಾನೂ ಊಟ ಮಾಡಿ ಆನಂದಭರಿತಳಾಗಿ ಎತ್ತಿನ ಬಂಡಿಯಲ್ಲಿ ಕುಳಿತು ಗಂಡನೊಡನೆ ಪ್ರಯಾಣ ಬೆಳೆಸಿದಳು. ಈ ವ್ರತ ಮಹಿಮೆಯಿಂದ ಕೌಂಡಿಣ್ಯನ ಆಶ್ರಮವು ಗೋವು, ಧನ, ಧಾನ್ಯ ಸಂಪತ್ತಿನಿಂದ ಸಮೃದ್ಧವಾಯಿತು. ನಿತ್ಯದಲ್ಲಿಯೂ ಅತಿಥಿ ಸತ್ಕಾರಗಳು ನಡೆಯುತ್ತಿದ್ದವು. ಒಂದಾನೊಂದು ದಿವಸ ಶೀಲೆಯು ತೋಳಿನಲ್ಲಿ ಕಟ್ಟಿದ್ದ ಆ ದಾರವನ್ನು ಕೌಂಡಿಣ್ಯನು ನೋಡಿ — ಶೀಲೆಯೇ ಇದೇನು? ನನ್ನನ್ನು ವಶಮಾಡಿಕೊಳ್ಳಲು ಈ ದಾರವನ್ನು ಕಟ್ಟಿಕೊಂಡಿರುವೆಯಾ? ಹೇಳು ಎನ್ನಲು ಅವಳು 'ಶ್ರೀ ಅನಂತದೇವನ ಸಾನ್ನಿಧ್ಯವುಳ್ಳ ದಾರವನ್ನು ಕಟ್ಟಿಕೊಂಡಿದ್ದೇನೆ' ಎಂಬುದಾಗಿ ಉತ್ತರಿಸಿದಳು. ಆದರೆ ಐಶ್ವರ್ಯದ ಮದದಿಂದ ಅವನು ದಾರವನ್ನು ಕಡಿದು ತೆಗೆದು ಅಗ್ನಿಯಲ್ಲಿ ಬಿಸಾಡಿದನು. ಕೂಡಲೇ ಶೀಲೆಯು ಅದನ್ನು ತೆಗೆದು ಹಾಲಿನಲ್ಲಿ ಹಾಕಿದಳು. ಈ ದುಷ್ಕರ್ಮ ಪರಿಪಾಕದಿಂದ ಕೆಲವೇ ದಿನಗಳಲ್ಲಿ ಕೌಂಡಿಣ್ಯನ ಸಂಪತ್ತೆಲ್ಲವೂ ನಷ್ಟವಾಯಿತು. ಕಳ್ಳರು ಹಣವನ್ನು ದೋಚಿಕೊಂಡು ಹೋದರು. ಮನೆಗೆ ಬೆಂಕಿ ಹತ್ತಿತು. ಅಲ್ಲದೇ ಮನೆಯಲ್ಲಿ ದಿನೇ ದಿನೇ ಕಲಹವು ಹೆಚ್ಚಾಗ ತೊಡಗಿತು. ಅಶಾಂತಿಯು ತಲೆದೋರಿತು. ಇದರಿಂದ ಕಂಗೆಟ್ಟವನಾಗಿ ಕೌಂಡಿಣ್ಯನು ಹೆಂಡತಿಯನ್ನು ಈ ಬಗ್ಗೆ ವಿಚಾರಿಸ ತೊಡಗಿದನು.

ಶೀಲೆಯು "ನಿಮ್ಮ ದುರ್ನಡತೆಯಿಂದಾಗಿ ನಿಮಗೆ ಈ ದುಃಖವು ಪ್ರಾಪ್ತವಾಗಿರುವುದು. ಕಾರಣ ನೀವು ಶ್ರೀ ಅನಂತದೇವನನ್ನೇ ಮೊರೆ ಹೋಗಬೇಕು" ಎಂಬುದಾಗಿ ಸಮಾಧಾನ ಹೇಳಿದಳು.

ಸಂತಾಪದಿಂದ ತಪ್ತನಾದ ಅವನಲ್ಲಿ ಪರಮಾತ್ಮನ ಬಗ್ಗೆ ಆದರ ಭಾವನೆಗಳು ಮೂಡತೊಡಗಿದವು. ಶ್ರೀ ಅನಂತದೇವನ ಅನುಗ್ರಹಕ್ಕಾಗಿ ಹಾತೊರೆಯತೊಡಗಿದನು. ಆ ದೇವನನ್ನು ಕಾಣಲು ಅರಣ್ಯದ ಮಾರ್ಗವನ್ನು ಹಿಡಿದು ದಾರಿಯಲ್ಲಿ ಭೆಟ್ಟಿಯಾದವರನ್ನೆಲ್ಲ "ನೀವು ಅನಂತನನ್ನು ಕಂಡಿದ್ದೀರಾ?" ಎಂದಾಗಿ ಹಲುಬುತ್ತ ನಡೆದ. ಗಾಳಿಯನ್ನೇ ಆಹಾರವನ್ನಾಗಿ ಸ್ವೀಕರಿಸುತ್ತ 'ಅನಂತ! ಅನಂತ!' ಎಂಬುನಾಗಿ ಜಪಿಸತೊಡಗಿದ. ಕೊನೆಗೆ ಪ್ರಾಣವನ್ನೇ ಬಿಡಲು ನಿಶ್ಚಯಿಸಿದ. ಆಗ ಕರುಣಾಸಮುದ್ರನಾದ ಆ ಅನಂತದೇವನು ಮುದಿ ಬ್ರಾಹ್ಮಣನ ವೇಷದಿಂದ ಪ್ರತ್ಯಕ್ಷನಾಗಿ ಅವನನ್ನು ಕೈ ಹಿಡಿದು ಕರೆದುಕೊಂಡು ಹೋಗಿ ಅಲ್ಲಿ ದೇವತಾ ಸ್ತ್ರೀ ಪುರುಷರಿಂದ ತುಂಬಿದ್ದ ಪಟ್ಟಣವನ್ನು ಹಾಗೂ ಶಂಖ ಚಕ್ರಗಳಿಂದ ಶೋಭಿಸುವ ತನ್ನನ್ನು ತೋರಿಸಿದ. ಆಗ ಕೌಂಡಿಣ್ಯನು ಅವನ ಪಾದಗಳನ್ನು ಗಟ್ಟಿಯಾಗಿ ಹಿಡಿದು ಜಯ! ಜಯ! ಎಂದು ಹೇಳುತ್ತಾ ನಮಸ್ಕರಿಸಿ, "ಕಮಲದಳದಂತೆ ವಿಶಾಲ ನೇತ್ರವುಳ್ಳ ಪರಮಾತ್ಮನೇ! ನನ್ನನ್ನು ಕಾಪಾಡು, ಸಮಸ್ತ ಪಾಪಗಳನ್ನು ಪರಿಹರಿಸು. ಈ ನನ್ನ ಜನ್ಮವು ಸಫಲವಾಯಿತು. ಸ್ವಾಮಿಯೇ ನಾನು ಸಂಪತ್ತಿನ ಗರ್ವದಿಂದ ನಿನ್ನ ಅನಂತ ದಾರವನ್ನು ಕಡಿದು ಹಾಕಿದೆ ನನ್ನನ್ನು ಕ್ಷಮಿಸು" ಅಂಗಲಾಚಿ ಬೇಡಿದನು.

( 28ನೇ ಪುಟ ನೋಡಿ )

ಕಲಾ ಪ್ರಪಂಚ

# ನಾಟ್ಯದ ಉತ್ಪತ್ತಿ

ಪಾರ್ವತೀ ಪರಮೇಶ್ವರರಲ್ಲಿ ಪರಿಪಕ್ವವಾದ ನಾಟ್ಯವು ಮನುಷ್ಯರಿಗೆ ಹೇಗೆ ಲಭ್ಯ ವಾಯಿತೆಂಬುದೂ, ಎಂದು ಲಭಿಸಿತೆಂಬುದೂ ಕೇವಲ ಕಲ್ಪನೆಯ ಆಧಾರದಿಂದ ಹೇಳತಕ್ಕ ವಿಷಯಗಳು. ಈಶ್ವರಾನುಗ್ರಹದಿಂದ ಮನುಷ್ಯ ತನ್ನೊಂದಿಗೆ ಪಡೆದಿದ್ದು ಕಲ್ಪನಾಶಕ್ತಿ ಹೊಂದಿದ ಬುದ್ಧಿ, ಜಗನ್ಮಾತೆಯಾದ ಪ್ರಕೃತಿಯಿಂದ ಕಲಿತದ್ದು ನೋಡಿ ಗ್ರಹಿಸಿ ಅನುಕರಿಸುವ ಜಾಣ್ಮೆ. ಈ ಕಲ್ಪನೆ, ಅನುಕರಣೆ ಎಂಬ ಎರಡೇ ಮನುಷ್ಯನಲ್ಲಿನ ನಾಟ್ಯಶಕ್ತಿಯನ್ನು ಉದ್ಬೋಧಿಸಿ ವಿಕಸನಗೊಳಿಸಿತು ಎನ್ನುವುದೇ ಇಂದಿನ ನಮ್ಮ ಊಹೆಗೆ ಸಿಕ್ಕ ಸತ್ಯ.

ಆದಿ ಮಾನವನು ಪ್ರಕೃತಿಯಲ್ಲಿ ಜೀವಿಸುತ್ತ ತನ್ನ ಕಣ್ಣ ಮುಂದೆ ಚಲಿಸುವ ಪಶು ಪಕ್ಷ್ಯಾದಿಗಳಲ್ಲಿ ಪ್ರಕಟವಾದ ನಾಟ್ಯವನ್ನು ನೋಡಿ ಆನಂದಿಸಿ ಚಿತ್ತಳಿಗೆ ಮುಗ್ಧನಾಗಿ ಕೊನೆಗೆ ತಾನೂ ಸಹ ನರ್ತಿಸಿ ತನ್ನ ಶಕ್ತಿಯನ್ನು ತಾನು ಗುರುತಿಸಿ ಸಂತೋಷ ಪರವಶನಾಗಿದ್ದಿರಬಹುದು. ಉತ್ಸಾಹ ಉಲ್ಲಾಸವುಂಟಾದಾಗ ಹಾಡಿ ಕುಣಿಯುವುದರಲ್ಲಿ ಅವುಗಳನ್ನು ಪ್ರಕಟಿಸಿರಬಹುದು. ಆನಂದಿಸಿದಂತೆ ಕುಣಿದು ಕುಪ್ಪಳಿಸಿ ಆನಂದ ಹೊಂದಿಯೂ ಇರಬಹುದು. ಆನಂದ ನರ್ತನ ಎನ್ನುವುದು ಅನ್ಯೋನ್ಯ ಸಾಪೇಕ್ಷವಾದವು. ಒಂದು ಅಂತರಂಗಿಕವಾದರೆ ಅದರ ಬಹಿರಂಗ ಪ್ರತಿಕ್ರಿಯೆ ಎರಡನೆಯದು. ಮೊದಲಿನದು ಭಾವವಾದರೆ ಎರಡನೆಯದು ಆ ಭಾವವನ್ನು ಪ್ರಕಟಿಸುವ ಅನುಭಾವ. ಒಂದಕ್ಕೊಂದು ಪ್ರೇರಕಗಳು. ಈ ಅಂಶವು ನಾವು ದಿನವೂ ಅನುಭವಿಸುವಂತಹುದೇ. ಉತ್ಸಾಹದಿಂದ ಕುಣಿದಾಡಲೂ, ಉಲ್ಲಾಸದಿಂದ ಹಾಡಲೂ ಒಂದೊಮ್ಮೆ ನಾವು ಸಭ್ಯತಾವಶರಾಗಿ ಹಿಂಜರಿದರೂ, ಚಿಕ್ಕಮಕ್ಕಳಲ್ಲಿ ಮಾತ್ರ ಅಂತಹ ಹಿಂಜರಿಕೆಯಿಲ್ಲದಿರುವುದನ್ನು ಗಮನಿಸದಿರಲಾರೆವು. ಯಾವಾಗ ಆನಂದ ಉಂಟಾದರೆ ಆಗಲೇ ಮುಚ್ಚುಮರೆಯಿಲ್ಲದೆ ಹಾರಿ ಕಣಿದು ಕುಪ್ಪಳಿಸಿ ಕೂಗಿ ಚಪ್ಪಾಳೆ ಹೊಡೆದು ತದನುಗುಣವಾಗಿ ಹೆಜ್ಜೆ ಹಾಕಿ, ಬೇಡುವೆನ್ನುತ್ತ ನಮ್ಮ ಮೂರ್ಖತನವನ್ನು ನಾವು ಪ್ರಕಟಿಸುವವರೆಗೆ ಕುಣಿಯುತ್ತಲೇ ಇರುತ್ತಾರೆ. ಆದಿಮಾನವನೂ ಸಹ ಇಂದಿನ ಪುಟ್ಟ ಮಕ್ಕಳಂತೆಯೇ ತನಗೆ ಆನಂದ ಉಂಟಾದಾಗ ಲೀಲ್ಲಾ ತನ್ಮಯನಾಗಿ ತಾಂಡವಿಸುತ್ತಿದ್ದನೆಂದು ಹೇಳಲು "ಮಾನವನ ವಿಕಾಸವನ್ನು ಚಿಕ್ಕಮಕ್ಕಳ ಜೀವನದಲ್ಲಿ ಗಮನಿಸಬಹುದು" ಎನ್ನುವ ವಿಕಾಸವಾದಿಗಳ ಸಿದ್ಧಾಂತವೇ ಪರಮ ಪ್ರಮಾಣ. ಅನುಕರಣೆ, ಕಲ್ಪನೆ, ಕ್ರೀಡೆ, ಎಂಬುವು ಮಾನವನಿಗೆ ಹುಟ್ಟನಿಂದ ಬಂದ ಸಹಜ ಪ್ರವೃತ್ತಿಗಳೆಂದು ವಿಜ್ಞಾನಿಗಳೆಲ್ಲರೂ ನಂಬಿದ್ದಾರೆ. ನಾಟ್ಯವೂ ಒಂದು ಕ್ರೀಡೆ. ಇದಕ್ಕೆ ಮಿಕ್ಕ ಪ್ರವೃತ್ತಿಗಳೂ ಸಹ ಕರಿಸಿದಲ್ಲಿ ಇದು ಕಲೆಯಾಗಿ ಪರಿವರ್ತನೆ ಹೊಂದುವುದು.

ಬುದ್ಧಿಯಿರುವ ಮಾನವನಿಗೆ ತನಗೆ ಆನಂದ ಉಂಟಾಗಿಸಿದ ವಿಷಯವು ಇನ್ನೊಬ್ಬರಿಗೂ ಆನಂದ ಉಂಟಾಗಿಸುವುದೆಂಬ ಗ್ರಹಿಕೆ ಕಷ್ಟವೇನಲ್ಲ. ನವಿಲು, ಕೋಗಿಲೆ ಮೊದಲಾದ ಪಕ್ಷಿಗಳು ಹಾಡಿ ಹಾರಾಡಿ ತಮ್ಮ ಜೊತೆಗಳನ್ನು ಸಮ್ಮುಖರನ್ನಾಗಿ ಮಾಡಿಕೊಳ್ಳುವುದನ್ನು ನೋಡಿದ ಆದಿಮಾನವನೂ ಸಹ ತನ್ನ ಪ್ರೇಯಸಿಯನ್ನು ವಶಪಡಿಸಿಕೊಳ್ಳಲು ಯಾವುದೋ ಪಕ್ಷಿಯಂತೆಯೋ, ಪಶುವಿನಂತೆಯೋ ಮಾರುವೇಷದಿಂದ ಆಯಾ ಚೇಷ್ಟೆ, ಸ್ವರಾದಿಗಳನ್ನು ಅನುಕರಿಸಿ ಅದಕ್ಕೆ ತಕ್ಕಂತೆ ನಟಿಸಿದ್ದೇ ಅಲ್ಲದೆ, ಇತರ ಸ್ಥಳಗಳಲ್ಲಿ ಇತರ ವಿಷಯಗಳಲ್ಲಿಯೂ, ತನ್ನ ಕೋರಿಕೆಯ ಈಡೇರಿಕೆಗಾಗಿಯೋ, ತನಗಿದ್ದ ಭಯದ ನಿವಾರಣೆಗಾಗಿಯೋ, ತನ್ನ ಆತ್ಮವನ್ನು ವಿಸ್ಮೃತಗೊಳಿಸಿ ಸಂತೃಪ್ತಿ ಹೊಂದಲೆಂದೋ, ನಟಿಸಿರಬಹುದು. ಸಾಮೂಹಿಕ ಜೀವನಕ್ಕೆ. ಹೊಂದಿಕೊಂಡ ನಂತರ ತಾನು ನಟಿಸಿ ಇತರರನ್ನು ನರ್ತಿಸಲು ಪ್ರೋತ್ಸಾಹಿಸಿರಬಹುದು. ಯಾವುದೋ ಬೇಟೆ ದೊರಕಿದಾಗಲೋ, ಯಾವುದೋ ಹಸಿವು ತೀರಿದಾಗಲೋ, ಯಾವ ಸ್ಥಳದಲ್ಲಿಯೋ ಬೆಂಕಿಯ ಸುತ್ತ ಸೇರಿ ಚಳಿಗೆ ಕಾಯಿಸಿಕೊಳ್ಳುತ್ತಿರುವಾಗಲೋ, ಆದಿಮಾನವನು ತನ್ನ ಜೊತೆಯವರೊಂದಿಗೆ ಕೂಡಿ ಹುಚ್ಚುಕೂಗು ಹಾಕಿ ಕುಣಿದು ತನ್ನ ಆನಂದಕ್ಕೆ ಬಣ್ಣ ಕೊಟ್ಟಿರಬಹುದು. ನುಡಿ, ಸಾಮೂಹಿಕ ಜೀವನ ಮೊದಲಾದವು ಸ್ಥಾಯಿ ಹಂತವನ್ನು ಸೇರಿದ ನಂತರ ಬೇಟೆಯಲ್ಲಿರುವಂತೆಯೇ ವ್ಯವಸಾಯದಲ್ಲೂ ಸಹ ಆತ ಆರಂಭದಲ್ಲೂ ಅಂತ್ಯದಲ್ಲೂ ತನ್ನ ಆನಂದವನ್ನು ಹಾಡು ಕುಣಿತಗಳಲ್ಲಿ ವ್ಯಕ್ತಗೊಳಿಸಿರಬಹುದೆನ್ನಲು ಇಂದಿಗೂ ಅನಾಗರಿಕ ಜಾತಿಯವರಾದ ಪರ್ವತವಾಸಿಗಳಲ್ಲೆಲ್ಲ ಇಂತಹ ಆರಂಬನೃತ್ಯ, ವರ್ಷಾರಂಭೋತ್ಸವಗಳಲ್ಲಿನ ಸಾಮೂಹಿಕನೃತ್ಯ, ವೃಂದಗಾನಗಳಿರುವುದೇ ನಿದರ್ಶನಗಳು. ಆಯಾರೀತಿಯ ಉತ್ಸವಗಳಲ್ಲಿ ಆರಾಧಿತ ದೇವಿದೇವತೆಗಳೂ ಆದಿಮಾನವನಿಂದ ಆರಾಧಿಸಲ್ಪಡುತ್ತ ಬಂದಿರುವಂಹತವರೇ.

ಆದಿಮಾನವನು ತನಗೆ ಅತೀತವಾದ ಎಲ್ಲ ಪ್ರಕೃತಿ ಶಕ್ತಿಗಳನ್ನೂ ಗೌರವಿಸಿದನು. ಬೆಟ್ಟ, ನದಿ, ಮಳೆ, ನೆರೆ, ಗುಡುಗು, ಮಿಂಚು, ಕಾಡುಕೊಳ್ಳ ಇತ್ಯಾದಿಗಳಲ್ಲಿ ಆತನಿಗೆ ಯಾವುದೋ ಶಕ್ತಿಸ್ವರೂಪಗಳಾಗಿ ಕಂಡುಬಂದು ದೇವತೆಗಳಾಗಿಯೋ, ದೆವ್ವಗಳಾಗಿಯೋ, ಭಾವಿಸಲ್ಪಟ್ಟು ಅವುಗಳನ್ನು ಪ್ರಸನ್ನಗೊಳಿಸದಿದ್ದಲ್ಲಿ ತನ್ನ ಜೀವನ ಸುಖಮಯವಾಗದೆಂಬ ಭಾವವನ್ನು ಸ್ಫುರಣೆಗೊಳಿಸಿ ಅವನ ಭಕ್ತಿಗೆ ಭಯಕ್ಕೆ ಕಾರಣಗಳಾಗಿ ಹಾಡು ಹಸೆಗಳಿಂದಲೂ, ಉಪಹಾರಗಳಿಂದಲೂ ತಮ್ಮನ್ನು ಆರಾಧಿಸಬೇಕೆಂದು ಅವನನ್ನು ಪ್ರೋತ್ಸಾಹಿಸಿದವು. ಮೊದಲಿಗೆ ಅವ್ಯಕ್ತವಾಗಿ ಉದಿಸಿದ ಈ ದೈವೀ ಭಾವನೆಗೆ ನಂತರ ಎಂದೋ ವ್ಯಕ್ತ ಚಿನ್ಹೆಗಳನ್ನು ಏರ್ಪಡಿಸಿ ರೂಪ ಕಲ್ಪನೆ ಮಾಡಿ, ನಾಮಕರಣಗೊಳಿಸಿ ಅವುಗಳೊಂದಿಗೆ ತನ್ನ ಅವಿನಾಭಾವ ಸಂಬಂಧವನ್ನು ಏರ್ಪಡಿಸಿಕೊಂಡು ತನ್ನ ಕಷ್ಟಸುಖಗಳನ್ನು ಅವುಗಳಿಗೆ ನಿವೇದಿಸಿಕೊಂಡು ಇವು ತೊಲಗಲೆಂದೂ, ಅವು ದೊರಕಲೆಂದೂ ಪ್ರಾರ್ಥಿಸಿ ಪ್ರಥಮ ಮನುಷ್ಯನು ಆಸ್ತಿಕನಾಗಿ ಪರಿವರ್ತಿತನಾಗಿರಬಹುದು. ಈ ಆಸ್ತಿಕತೆ ಅವನೊಳಗಿದ್ದ ನಾಟ್ಯದೊಂದಿಗೇ ಆಯಾ ದೇವೀ ದೇವತೆಗಳ ಉತ್ಸವಗಳಲ್ಲಿ ಚರಿತಾರ್ಥವಾಗಿರಬಹುದು. ಪುನಃ ಪುನಃ ಆಚರಿಸುವುದರಿಂದಾಗಿ ಆರಾಧನೆಯೊಂದಿಗೇ ನಾಟ್ಯಕ್ಕೂ ಸಹ ಒಂದು ರೀತಿ ಕ್ರಮ, ರೀತಿ, ರಿವಾಜು, ವರಸೆವಾಡಿ ಎಂಬುವು ಏರ್ಪಟ್ಟು ನಿರರ್ಥಕವಾದ ಕುಪ್ಪಳಿಕೆಗೆ ಸಾರ್ಥಕತೆ ಉಂಟಾಗಿ, ಅಭ್ಯಾಸ ಪ್ರಯೋಜನಗಳಿಂದಾಗಿ ಆಚಾರವಾಗಿ ಮಾರ್ಪಟ್ಟು, ಆನಂತರ ಕೌಶಲವಾಗಿ ಪರಿಣಮಿಸಿರಬಹುದು. ಕೌಶಲ ವ್ಯಕ್ತಿನಿಷ್ಠವಾದದ್ದು. ಮೊದಲು ಒಬ್ಬನಲ್ಲಿ ನರ್ತಿಸಿ ಮೆಚ್ಚಿಸುವ ಕೌಶಲ ಪರಿಪಕ್ವವಾಗುವ ಹೊತ್ತಿಗೆ ಅವನನ್ನು ಅನುಸರಿಸುವವರಲ್ಲಿ ಅದು ಸಂಪ್ರದಾಯವಾಗಿ ಸೇರಿ, ಅದರ ಪ್ರತ್ಯೇಕತೆಯನ್ನು ಗುರುತಿಸಿ ಅಳವಡಿಸಿಕೊಂಡ ನಂತರ ಅದೇ ಕಡೆಗೆ ಶಾಸ್ತ್ರವಾಗಿ ರೂಪ ಹೊಂದುತ್ತದೆ. ಶಾಸ್ತ್ರವನ್ನು ಮೀರಿ ನಡೆಯಬಲ್ಲ ಪ್ರಜ್ಞಾವಂತರ ಉದಯವಾದಾಗಲೂ, ಶಾಸ್ತ್ರವನ್ನು ಅನುಕರಿಸಲಾಗದೆ ಅಸಫಲ ಪ್ರಯತ್ನರಾಗಿ ಹೊಸ ಪದ್ಧತಿಗಳಲ್ಲಿ ನಡೆಯುವ ಕೈಲಾಗದವರು ಬಹಳ ಮಂದಿ

ಮೂಲ: ಡಾ॥ ಎಂ. ಸಂಗಮೇಶಂ.

ಅನುವಾದ :

ಶ್ರೀಮತಿ ಎಸ್. ವಿ. ಹೇಮಾವತಿ.
ಎಂ.ಎ.,

ಯಾದಾಗಲೂ, ಶಾಸ್ತ್ರಕ್ಕೆ ಸಂಸ್ಕಾರವು ವಿಧೇಯವಾಗಿ ವಿಕಾಸ ಎನ್ನುವ ಹೆಸರಿನಿಂದ ಶಾಸ್ತ್ರಾಭಿವೃದ್ಧಿಗೆ ಸಹಕಾರಿಯಾಗುತ್ತದೆ. ಆದಿಮಾನವನ ಸಹಜ ಕ್ರೀಡಾಪ್ರವೃತ್ತಿಯೇ ನಾಟ್ಯಕ್ಕೆ ಮೂಲವೆಂದೂ ಅವನಿಗಿದ್ದ ಅನುಕರಣ ಕಲ್ಪನಾ ಶಕ್ತಿಗಳೇ ಇದನ್ನು ಕಲೆಯಾಗಿ ಬೆಳಸಿದವೆಂದೂ, ಆಸ್ತಿಕತೆ ಈ ಅಭಿವೃದ್ಧಿಯನ್ನು ಅನುಕೂಲಗೊಳಿಸಿತೆಂದೂ ಕಾಲಕ್ರಮೇಣ ಇದಕ್ಕೆ ಸಂಬಂಧಿಸಿದ ಪದ್ಧತಿಗಳೆಲ್ಲವನ್ನೂ ಕ್ರೋಢೀಕರಿಸಿ ಇದನ್ನು ಶಾಸ್ತ್ರೀಯವನ್ನಾಗಿಸಲಾಯಿಂತೆಂದೂ ಈವರೆಗಿನ ಮಾತುಗಳಿಂದ ಗ್ರಹಿಸಬಹುದು.

ನಾಟ್ಯಕಲೆಯ ಉದಯವನ್ನು ಕುರಿತಾದ ಮೇಲಿನ ನಿರ್ಣಯಕ್ಕೆ ಪ್ರಬಲವಾದ ಪ್ರತಿಬಂಧಕವೆಂದರೆ ಭರತಶಾಸ್ತ್ರದಲ್ಲಿ ಈ ವಿಷಯದ ಬಗ್ಗೆ ಬರೆಯಲ್ಪಟ್ಟು ಅಂದಿನಿಂದಲೂ ಕೇಳಿ ಬರುತ್ತಿರುವ ಕಥೆ. ಸೂಕ್ಷ್ಮವಾಗಿ ಆ ಕಥೆ ಹೀಗಿದೆ. ಪೂರ್ವದಲ್ಲಿ ಒಂದೊಮ್ಮೆ ಜಂಬೂದ್ವೀಪವಾಸಿಗಳು ಗ್ರಾಮಧರ್ಮ ಪ್ರವೃತ್ತರಾಗಿ ಕಾಮಲೋಭವಶರಾಗಿ ಪತಿತಾವಸ್ಥೆಗೆ ಜಾರಿದರೆಂದೂ ಇದನ್ನು ನೋಡಿದ ಇಂದ್ರನು ಇತರ ದೇವತೆಗಳೊಡನೆ ಬ್ರಹ್ಮನಲ್ಲಿಗೆ ಹೋಗಿ ಮಾನವರ ಸ್ಥಿತಿಗಳನ್ನು ನಿವೇದಿಸಿ ಇದುವರೆಗಣ ಪ್ರಾಚೀನ ಮಾರ್ಗದಲ್ಲಿ ಮಾನವನ್ನು ಉದ್ಧರಿಸಲು ಸಾಧ್ಯವಿಲ್ಲವೆಂದೂ ಯಾವುದಾದರೂ ಹೊಸಮಾರ್ಗವನ್ನು ಸೂಚಿಸಬೇಕೆಂದೂ ಕೇಳಿಕೊಂಡನಂತೆ, ಮೇಲಾಗಿ:

ನ ವೇದ ವ್ಯವಹಾರೋಯಂ
ಸಂಶ್ರಾವ್ಯಃ ಶೂದ್ರಜಾತಿಷು
ತಸ್ಮಾತ್ ಸೃಜಾಪರಂ ವೇದಂ
ಪಂಚಮಂ ಸಾರ್ವವರ್ಣಿಕಂ

ಎನ್ನುತ್ತ ಎಲ್ಲರಿಗೂ ಅನುಕರಣೀಯವಾದ ಪಂಚಮವೇದವೊಂದನ್ನು ಸೃಜಿಸಿದರೆ ಉತ್ತಮ ಎಂದೂ ಸಲಹೆ ನೀಡಿದನಂತೆ. ಬ್ರಹ್ಮನು ಹಾಗೇ ಆಗಲೆಂದು ಪಂಚಮ ವೇದ ಸೃಜನೆಗೆ ಆರಂಭಿಸಿದನು. ಇದಕ್ಕಾಗಿ ಆತ ಮಾಡಿದ್ದು ಎಂದರೆ;

ಜಗ್ರಾಹ ಪಾಠ್ಯಂ ಋಗ್ವೇದಾತ್
ಸಾಮಭ್ಯೋ ಗಾನಮೇವ ಚ
ಯಜುರ್ವೇದಾಭಿನಯಂ
ರಸನಾದಥರ್ವಣಾದಪಿ

ಅಂದು ಇದ್ದಂತಹ ಋಕ್, ಯಜುರ್, ಸಾಮ, ಅಥರ್ವಣಗಳೆಂಬ ನಾಲ್ಕು ವೇದಗಳಿಂದ ಕ್ರಮವಾಗಿ ವಸ್ತು, ಅಭಿನಯ, ಗಾನ, ರಸಗಳನ್ನು ಗ್ರಹಿಸಿ, ಎಲ್ಲರಿಗೂ ಉಪಕರಿಸುವ ನಾಟ್ಯವೇದವನ್ನು ಸೃಜಿಸಿ 'ಇತಿಹಾಸ' ವೆಂದು ಹೆಸರಿಟ್ಟನಂತೆ. ನಂತರ ಅದನ್ನು ದೇವೇಂದ್ರನಿಗೆ ನೀಡಿ ಬಳಸಲು ಹೇಳಿದನು. ಆದರೆ ದೇವತೆಗಳಿಗೂ ಅದು ಕಚ್ಚಲಾಗದ ಕಾಯಾಗಿ, ಎಟುಕದ ದ್ರಾಕ್ಷಿಯಾದಾಗ ದೇವೇಂದ್ರನೂ ಪ್ರಯೋಗ ಪ್ರಯತ್ನದಿಂದ ದೂರನಾದಂತೆ. ಆಗ ಬ್ರಹ್ಮನು ಭೂಲೋಕದ ಭರತಮುನಿಯನ್ನು ಕರೆದು ನಾಟ್ಯವೇದವನ್ನು ಅವನಿಗೆ ಹೇಳಿಕೊಟ್ಟು, ಭೂಲೋಕದಲ್ಲಿ ಇದರ ಪ್ರಯೋಗ ಪ್ರಚಾರದಲ್ಲಿ ತೊಡಗಲು ಪ್ರೋತ್ಸಾಹಿಸಿದನಂತೆ. ಭರತನು ಅದನ್ನು ಗ್ರಹಿಸಿ ಭೂಮಿಗೆ ಬಂದು ಇತರರ ಗೊಡವೆ ಏಕೆಂದು ತನ್ನ ನೂರು ಮಂದಿ ಮಕ್ಕಳನ್ನು ನಾಟ್ಯವೇದ ಪಾರಂಗತರನ್ನಾಗಿ ಮಾಡಿದನಂತೆ. ಆದರೆ ಸ್ತ್ರೀ ಪಾತ್ರಕ್ಕಾಗಲೀ, ಆ ಅಭಿನಯಕಾಗಲೀ ಈ ನೂರು ಮಂದಿಯಲ್ಲಿ ಒಬ್ಬರೂ ಕೆಲಸಕ್ಕೆ ಬಾರದವರಾದುದರಿಂದ ಮತ್ತೆ ಬ್ರಹ್ಮನಲ್ಲಿಗೆ ಹೋಗಬೇಕಾಯಿತು.

ಕೈಶಿಕೀಶ್ಲಕ್ಷ್ಣ ನೇಪಥ್ಯಾ
ಶೃಂಗಾರ ರಸಸಂಭವಾ
ಅಶಕ್ಯಾ ಪುರುಷೈಃ ಸಾಧು
ಪ್ರಯೋಕ್ತುಂ ಸ್ತ್ರೀ ಜನಾದೃತೇ

ಎಂದು ಶೃಂಗಾರ ರಸದಿಂದ ಕೂಡಿದ ಅಭಿನಯ ಬೇಕಾದಲ್ಲಿ ಹೆಂಗಸರೇ ಸ್ತ್ರೀ ಪಾತ್ರಗಳನ್ನು ಹಾಕಬೇಕೆಂದೂ ಗಂಡಸರು ಇಲ್ಲಿ ಸುತರಾಂ ಕೆಲಸಕ್ಕೆ ಬಾರದವರೆಂದೂ ಹೇಳಿ, ಆತನಿಂದ ಅಪ್ಸರೆಯರನ್ನು ಸೃಷ್ಟಿ ಮಾಡಿಸಿಕೊಂಡು ಬಂದನಂತೆ. ಅವರಿಗೂ ಸಹ ತರಬೇತಿ ನೀಡಿ, ನಾರದಾದಿಗಳಿಂದ ಸಂಗೀತದ ನೆರವನ್ನು ಹೊಂದಿ, ಮೊಟ್ಟ ಮೊದಲ ಸಾರಿಗೆ ದೇವತೆಗಳಿಗೆ ರಾಕ್ಷಸರ ಮೇಲೆ ಉಂಟಾದ ಜಯದ ವಿಷಯವನ್ನು ನಿರೂಪಿಸುವ ನಾಟ್ಯವನ್ನು ದೇವಸಭೆಯಲ್ಲಿ ಪ್ರಯೋಗಿಸಿದನಂತೆ. ಆದರೆ ರಾಕ್ಷಸರಿಗೆ ಇದು ಕಣ್ಣುರಿಯಾಗಿದ್ದುದರಿಂದ ಅವರು ತಿರಿಗಿಬಿದ್ದು ನಾಟ್ಯವನ್ನು ಪೂರ್ತಿಗೊಳಿಸಲು ಬಿಡಲಿಲ್ಲವಂತೆ. ಕೂಡಲೇ ಬ್ರಹ್ಮನು ಮಧ್ಯೆ ಪ್ರವೇಶಿಸಿ ರಾಕ್ಷಸ ಸಭೆಯನ್ನು ಕರೆದು ಈ ನಾಟ್ಯ ಅವರನ್ನು ಅವಮಾನಿಸಿ ಕೀಳು ಮಾಡುವುದಿಲ್ಲವೆಂದೂ, ಎಲ್ಲರಿಗೂ ಆನಂದವನ್ನು ನೀಡುವುದೆಂದೂ ಹೇಳುತ್ತ ;

'ಲೋಕ ವೃತ್ತಾನುಕರಣಂ
ನಾಟ್ಯಮೇ ತನ್ಮಯಾಕೃತಂ
ಉತ್ತಮಾಧಮ ಮಧ್ಯಾನಾಂ
ನರಾಣಾಂ ಕರ್ಮ ಸಂಶ್ರಯಂ
ವಿನೋದಜನನ ಕಾಲೇ
ನಾಟ್ಯಮೇತತ್ ಭವಿಷ್ಯತಿ
ಶೃತಿ ಸ್ಮೃತಿ ಸದಾಚಾರ
ಪರಿಶೇಷಾರ್ಥ ಕಲ್ಪನಂ
ಸರ್ವೋಪದೇಶ ಜನನಂ
ನಾಟ್ಯಮೇತತ್ ಭವಿಷ್ಯತಿ
ದುಃಖಾರ್ತಾನಾಂ ಶ್ರಮಾರ್ತಾನಾಂ
ಶೋಕಾರ್ತಾನಾಮ್ ತಪಸ್ವಿನಾಂ'

ಎಂದು ಲೋಕ ವೃತ್ತವೇ ನಾಟ್ಯದಲ್ಲಿ ಅನುಕರಿಸಲ್ಪಡುವುದೆಂದೂ, ಉತ್ತಮ, ಮಧ್ಯಮ ಅಥವ ಎನ್ನುವ ಭೇದವಿಲ್ಲದೆ ಎಲ್ಲರ ಚೇಷ್ಟೆ ಸ್ವಭಾವಾದಿಗಳನ್ನು ಅನುಕರಿಸಬಹುದುದೆಂದೂ ಎಲ್ಲರಿಗೂ ಉಪಕರಿಸುವಂತೆ ತಾನು ಅದನ್ನು ಉಂಟಾಗಿಸಿದೆನೆಂದೂ ಅದರಿಂದ ವಿನೋದವೇ ಅಲ್ಲದೆ ವಿಜ್ಞಾನವೂ ಹರಡುವುದೆಂದೂ ದುಃಖ ಶೋಕ, ವೈರಾಗ್ಯ ಸಂತಪ್ತರಿಗೆಲ್ಲ ಇದರಲ್ಲಿ ಮನಶ್ಶಾಂತಿ ದೊರೆಯುತ್ತದೆಯೆಂದೂ ದೀರ್ಘೋಪನ್ಯಾಸ ನೀಡಿ ಸಮಾಧಾನಮಾಡಿದನಂತೆ. ರಾಕ್ಷಸರು ಒಳ್ಳೆಯವರು, 'ಹಾಗಾದರೆ ಸರಿ ನಿಮ್ಮ ಪಾಡಿಗೆ ನೀವು ಆಡಿಕೊಳ್ಳಿ,' ಎಂದು ಸುಮ್ಮನಾದರು. ಆದರೆ ದೇವತೆಗಳು ಅವರನ್ನು ನಂಬರು, ನಂಬಲಾರರು. ಬಯಲಿನಲ್ಲಿ ನಾಟ್ಯವಾಡುವುದಕ್ಕಿಂತಲೂ ಆವರಣದೊಳಗೆ ಆಡುವುದು ಒಳಿತೆಂದು ಅನುಭವದಿಂದ ಗ್ರಹಿಸಿದರು. ಆದಕ್ಕಾಗಿ ತಕ್ಕ ನಾಟ್ಯಗೃಹವನ್ನು ನಿರ್ಮಿಸಿದ ನಂತರ ಭರತನೂ ಎಚ್ಚರಿಕೆ ವಹಿಸಿ ಮೊದಲಿನ ಕಥೆಯನ್ನು ಬಿಟ್ಟು ಅಮೃತ ಮಥನವೆಂಬ ಇನ್ನೊಂದು ಹೊಸ ನಾಟ್ಯವನ್ನು ಪೂಜಾದಿಗಳನ್ನು ಮಾಡಿ ಸಫಲವಾಗಿ ನಿರ್ವಹಿಸಿ ಬ್ರಹ್ಮನನ್ನು ಮೆಚ್ಚಿಸಿದನಂತೆ. ಆತನ ಶಿಫಾರಸಿನ ಮೇಲೆ ತ್ರಿಪುರದಹನವೆಂಬ ನಾಟ್ಯವನ್ನು ಶಂಕರನೆದುರು ಪ್ರದರ್ಶಿಸಿ ಶಹಬಾಸಗಿರಿಯನ್ನು ಸಂಪಾದಿಸಿದನು. ಈ ನಾಟ್ಯವನ್ನು ಇನ್ನೂ ತಿದ್ದಿ ತೀಡಿ ಸುವ್ಯವಸ್ಥಿತಗೊಳಿಸಿ ಅಭಿವೃದ್ಧಿಗೆ ತರಬೇಕೆಂಬ ಸದುದ್ದೇಶದಿಂದ ಶಿವನು ಇದರಲ್ಲಿ ನೃತ್ಯಗೀತೆಯನ್ನು ಸೇರಿಸಿ ಅದಕ್ಕೆ ಬೇಕಾದ ತರಬೇತಿಯನ್ನು ತುಂಡನಿಂದ ಕೊಡಿಸಿದನಂತೆ. ಪಾರ್ವತಿಯೂ ಕೋಮಲ ನೃತ್ಯವನ್ನು ನೀಡಿದಳಂತೆ. ಇವೆಲ್ಲವನ್ನೂ ಗಂಟು ಕಟ್ಟಿಕೊಂಡು ಬಂದ ಭರತನೂ ಆತನ ಮಕ್ಕಳೂ ಭೂಮಿಯಲ್ಲಿ ನಾಟ್ಯವನ್ನು ಪ್ರಸಾರಕ್ಕೆ ತಂದರು.

ಕಥೆಗೆ ಕಾಲಿಲ್ಲವೆನ್ನುತ್ತಾರೆ. ಈ ಕಥೆಗೆ ಅವು ಸ್ವಲ್ಪವೂ ಇಲ್ಲ. ಆದರೇನು ? ಇದಕ್ಕೆ ಜೀವನವಿದೆ. ಎಲ್ಲರೊಂದಿಗೆ ನಾಟ್ಯಕ್ಕೂ ಮೂಲ ಅನಾದಿಯಾದ ಭಗವಂತನೇ ಎಂದೂ, ವೇದಗಳೊಂದಿಗೆ ಇದೂ ಅಪೌರುಷೇಯವೇ ಎಂದು ಹೇಳಿ ನಮ್ಮ ಆಸ್ತಿಕತೆಯನ್ನು ಸವ್ಯವಾಗಿ ಬಳಸಿ ಕೊಂಡದ್ದರಿಂದಲೇ ಈ ಕಥೆ ಇಲ್ಲಿಯವರೆಗೆ ಜೀವಿಸಿದೆ. ಹೀಗೆಂದು ಹೇಳುತ್ತ ತಮ್ಮ ಕೃತಿಗೆ ಪ್ರಾಣದಾನ ಮಾಡಿ ಗೌರವವನ್ನು ತಂದುಕೊಡುವ ಸಂಪ್ರದಾಯ ನಮ್ಮ ಎಲ್ಲ ಋಷಿಗಳಲ್ಲಿಯೂ ಕಂಡುಬರುತ್ತದೆ. ಭಾರತವೂ ಸಹ ನಾಟ್ಯದಿಂದಲೇ ಪಂಚಮ ವೇದವೆಂದಾಯಿತು.

ನತತ್ ಜ್ಞಾನಂ ನತಚ್ಛಿಲ್ಪಂ
ನಸಾ ವಿದ್ಯಾ ನಸಾ ಕಲಾ
ನಸ ಯೋಗೋ ನ ತತ್ಕರ್ಮ
ನಾಟ್ಯೇಸ್ಮಿನ್ ಯನ್ನವಿದ್ಯತೇ

ಎಂದು ನಾಟ್ಯವಿಲ್ಲದೆ ಜ್ಞಾನ, ಶಿಲ್ಪ, ವಿದ್ಯೆ, ಕಲೆ, ಯೋಗ, ಯಾವುದೂ ಇಲ್ಲವೆಂದು ಹೇಳಿದಂತೆಯೇ ಭಾರತದಲ್ಲಿಯೂ ಸಹ 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್' ಎಂದು ಹೇಳಿ ಅದರಲ್ಲಿದ್ದದ್ದು ಇನ್ನೊಂದೆಡೆಯಿಲ್ಲವೆಂದೂ ಇನ್ನೊಂದೆಡೆ ಇರುವುದೆಲ್ಲ ಅದರಲ್ಲಿದ್ದೇ ಇರುವುದೆಂದೂ ಹೇಳಲಾಗಿದೆ. ಪರಂಪರೆಯ ಕಥೆಯೇ ಭರತನಿಂದ ಮೇಲಿನ ಕಥೆಯನ್ನು ಆ ರೀತಿ ಹೇಳಿಸಿತೆನ್ನುವುದು ಸತ್ಯ.

ಸಂಪ್ರದಾಯದ ಸಂಗತಿಯನ್ನು ಸ್ವಲ್ಪ ಸರಿಸಿ ಕಥಾಗತ ವಿಷಯಗಳನ್ನು ಎಚ್ಚರಿಕೆಯಿಂದ ಗಮನಿಸಿದಲ್ಲಿ ಉಂಟಾಗುವ ಸಂದೇಹಗಳು ಸಹ ಕಡಮೆಯೇನಲ್ಲ.

1.) ಭರತನು ಭೂಲೋಕದಲ್ಲಿ ನಾಟ್ಯಪ್ರಯೋಗ ಮಾಡಿದಂತೆ ಹೇಳಲಾಗಿಲ್ಲ. ಎಲ್ಲ ಪ್ರಯೋಗಗಳೂ ದೇವಲೋಕದಲ್ಲಿಯೇ ನಡೆದವು. ನಂತರ ಎಂದೋ ಇದನ್ನು ಭೂಲೋಕದಲ್ಲಿ ಪ್ರಚಾರ ಮಾಡಲಾಯಿತೆಂದು ಹೇಳಿದನೇ ಹೊರತು, ಆಮಧ್ಯದ ಕಾಲವೆಷ್ಟೋ, ಭೂಲೋಕದಲ್ಲಿ ಆಡಿದ ಮೊದಲ ನಾಟ್ಯದ ರೂಪರೇಖೆಗೆ ಏನೋ ಆತ ತಿಳಿಸಿಲ್ಲ. ರೂಪರೇಖೆಗಳಿಗೇನು, ಕಾಲದಲ್ಲಿ ಒಂದು ಕಲ್ಪದಷ್ಟು ಹಿಂದಿನದೆಂದರೂ ನಮಗೆ ಸಂಶಯ ಉಂಟಾಗದೆ ಹೋಗಬಹುದೇನೋ!

2.) ಭರತನು ಪ್ರಯೋಗಿಸಿದ ನಾಟ್ಯದಲ್ಲಿ ಶಂಕರನು ತಾನು ಮೊದಲು ತಿಳಿದದ್ದು, ತಾನೇ ಅಲ್ಲ ತುಂಡನೂ ಸಹ ಪರಿಶ್ರಮದಿಂದ ಅಭ್ಯಾಸ ಮಾಡಿ ಮತ್ತೊಬ್ಬರಿಗೆ ತಿಳಿಸತಕ್ಕಷ್ಟನ್ನು ಜೀರ್ಣಿಸಿಕೊಂಡಷ್ಟು ನಾಟ್ಯವನ್ನು ಆತ ಜೋಡಿಸಿದನಂತೆ. ಪಾರ್ವತಿಯೂ ನರ್ತನವನ್ನು ಸೇರಿಸಿದಳು. ಇಷ್ಟೇ ಅಲ್ಲ 'ಗೀತ ಪ್ರಯೋಗಮಾಶ್ರಿತ್ಯ ನೃತ್ಯಮೇತತ್ ಪ್ರನೃತ್ಯತಾಂ' ಎಂದು ಹೇಳಿ ಗೀತವೂ ಸಹನೃತ್ಯದೊಂದಿಗಿರಬೇಕೆಂದು ಅದನ್ನೂ ಸೇರಿಸಿದನಂತೆ. ಎಂದರೆ ಮೊದಲಿಗೆ ಬ್ರಹ್ಮನು ಕಷ್ಟಪಟ್ಟು ನಾಲ್ಕು ವೇದಗಳನ್ನು ತಿರುಗಿಸಿ ಸೃಷ್ಟಿಸಿದ ನಾಟ್ಯವೇದದಲ್ಲಿ ಏನಿದ್ದಿತು? ಮೂಲವಾಗಿ ನೃತ್ಯಗೀತೆಗಳನ್ನು ಕುರಿತು ಆತನಿಗೆ ಸಾಕಲ್ಯವಾಗಿ ತಿಳಿದಿತ್ತೇ? ಆ ಅಂಶವನ್ನು ಭರತನೇ ನಿಸ್ಸಂಶಯವಾಗಿ ಬಿಡಿಸಿದ್ದಾನೆ. ಸ್ತ್ರೀಪಾತ್ರಗಳಿಗೆಸ್ತ್ರೀಯರೇ ಬೇಕೆಂದು ಬ್ರಹ್ಮನೊಡನೆ ಆತ ಅಂದಾಗ ಹೇಳಿದ ಮಾತುಗಳಿವು.

ಮೃದಂಗ ಹಾರ ಸಂಯುಕ್ತಾ
ರಸಭಾವ ಕ್ರಿಯಾಸುಚ
ದೃಷ್ಟಾಮಯಾ ಭಗವತೋ
ನೀಲಕಂಠಸ್ಯ ನೃತ್ಯತಃ
ಕೈಶಕೀಶ್ಲಕ್ಷ್ಣ ನೇಪಥ್ಯ ಶೃಂಗಾರ ರಸಸಂಭವಾ
ಅಶಕ್ಯಾ ಪುರುಷೈಃ ಸಾಧು
ಪ್ರಯೋಕ್ತುಂ ಸ್ತ್ರೀ ಜನಾದೃತೇ.

ನೀಲಲೋಹಿತನ ನಾಟ್ಯದಲ್ಲಿ ನಾನು ಕೈಶಕೀವೃತ್ತಿಭರಿತವಾದ ನಾಟ್ಯ ವಿಧಾನವನ್ನು ನೋಡಿದ್ದೇನೆ. ಅದು ರಸಭಾವ ಕ್ರಿಯಾದಿಗಳೆಲ್ಲದರಲ್ಲೂ ಅತಿ ಕೋಮಲರಾಗಿದ್ದು ಅದಕ್ಕೆ ತಕ್ಕ ಅಂಗ ಆಹಾರಾದಿಗಳಿಂದ ಒಪ್ಪಿ ಶೃಂಗಾರ ರಸಗಳೆಲ್ಲವನ್ನೂ ಸೇರಿಸಿಕೊಂಡು ನೇಪಥ್ಯ ರಚನಾದಿಗಳನ್ನ ಹೊಂದಿರುತ್ತದೆ. ಹೆಂಗಸರಿಲ್ಲದೆ ಗಂಡಸರಿಗೆ ಇದು ಪ್ರಯೋಗಸಾಧ್ಯವಲ್ಲ, ಎಂದು ಗುರು ಶಿಷ್ಯ ವ್ಯತಿಕ್ರಮ ಮಾಡಿ ಭರತನು ಆಡಿದ ಮಾತುಗಳೇ ಬ್ರಹ್ಮನನ್ನು ಈ ವಿಷಯದಲ್ಲಿಯೂ ಯಂಬ್ರಹ್ಮನಾಗಿ ನಿರೂಪಿಸುತ್ತದೆ. ಈವಿಷಯಗಳುಹೀಗಿದ್ದರೂ ನಾಟ್ಯವೇದವನ್ನು ನೋಡಿ ತಾನು ಯಾವುದೋ ಹೊಸದನ್ನು ಸೃಷ್ಟಿಸಿದಂತೆ ಬ್ರಹ್ಮನು 'ನಾಟ್ಯವೇ ತನ್ಮಯಾ ಕೃತಂ' ಎಂದು ಗರ್ವಪಟ್ಟನೇ ಹೊರತು ಅದು ಮೊದಲಿಗೆ ಪರಮಶಿವನಲ್ಲಿ ಸರ್ವಾಂಗ ಶೋಭೆಯಿಂದ ಪರಿಪಕ್ವವಾಗಿದ್ದ ಕಲೆ ಎಂಬುದು ಇಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ.

4. ನಾಲ್ಕು ವಿಷಯಗಳನ್ನು ಗ್ರಹಿಸಿ ನಾಟ್ಯವನ್ನು ಹೊಸದಾಗಿ ಬ್ರಹ್ಮನು ಸೃಷ್ಟಿಸಿದನೆನ್ನುವ ಮಾತೂ ಸರಿಯಲ್ಲವೆಂದು ಆ ನಾಲ್ಕು ವೇದಗಳೇ ಸಾವಿರ ನಾಲಗೆಗಳಿಂದ ಸಾಕ್ಷ್ಯನೀಡುತ್ತವೆ. ಋಗ್ವೇದದ ಈ ಕೆಳಗಿನ ಋಕ್ಕುಗಳನ್ನು ಗಮನಿಸಬಹುದು.

ದೇವತೆಗಳೆಲ್ಲ ನೋಡಿ ಮೆಚ್ಚುವಷ್ಟು ಸುಂದರವಾದ ಉಡುಪುಗಳನ್ನು ಧರಿಸಿ ಪ್ರಾಜ್ಞನಾದ ನರ್ತಕನಂತೆ ನಿನ್ನನ್ನು ನೀನು ವ್ಯಕ್ತಪಡಿಸಿದೆ. (6–28–4)

ನಮ್ಮ ಜೀವನವನ್ನು ಸುದೀರ್ಘಗೊಳಿಸಿಕೊಂಡು ಸಂತಸ ಪಡಲು ನಾವು ನಾಟ್ಯಕ್ಕೆ ನಗೆಗೆ ಇಳಿದೆವು. (10–18–3)

ಸಂಗೀತ ಪ್ರಿಯನಾದ ನರ್ತಕನೇ ದಾತೃತ್ವದಲ್ಲಿಯಾಗಲೀ, ಧನಸಂಪತ್ತಿನಲ್ಲಾಗಲೀ, ಶಕ್ತಿಯಲ್ಲಾಗಲೀ ನಿನ್ನ ಮೀರಿದವರನ್ನು ಯಾರನ್ನೂ ನಾನು ಕಂಡಿಲ್ಲ. (8–24–15)

ಸುವರ್ಣಾಲಂಕಾರ ಶೋಭಿತ ವಕ್ಷರಾದ ಓ ನರ್ತಕರೇ? ನಿಮ್ಮಿಂದಾಗಿ ಮರ್ತ್ಯರೆಲ್ಲರೂ ಸೋದರರಂತೆ ಕಲೆತು ಬಾಳುವ ಸುಸ್ಥಿತಿ ಉಂಟಾಗಿದೆ. (8–20–22)

ಆಕೆ ನರ್ತಕಿಯಂತೆ ಜಗಿಲ್ ಜಗಿಲ್ ಎಂಬ ವಸ್ತ್ರಗಳನ್ನು ಧರಿಸಿದಳು. ಹಸುವಿನ ಕೆಚ್ಚಲಿನಂತೆ ಆಕೆಯ ವಕ್ಷೋಜಗಳು ಪೂರ್ಣವಾಗಿವೆ. (8–20–22)

ಹೀಗೆ ಇನ್ನೂ ಬೇಕಾದಂತೆ ಉದ್ಧರಿಸಬಹುದು. ಇವುಗಳನ್ನು ನೋಡಿದ ನಂತರ ಅಲಂಕರಣ ಅಭಿನಯ, ಗೀತ, ರಸ, ಜೊತೆಗೇ ಆನಂದವೆಂಬ ಪ್ರಯೋಜನ ಹೊಂದಿದ ನಾಟ್ಯ ಋಗ್ವೇದ ಕಾಲದಲ್ಲೇ ಪ್ರಚಾರದಲ್ಲಿತ್ತೆಂದೂ ಶೃಂಗಾರವೂ ಅದರಲ್ಲಿ ಅಂದೇ ಹೆಜ್ಜೆಯಿಟ್ಟಿತೆಂದೂ ಸ್ಪಷ್ಟವಾಗುತ್ತದೆ ಹಾಗಾಗಿ ಬ್ರಹ್ಮ ಸೃಷ್ಟಿಯನ್ನು

'ಧಾತಾ ಯಥಾ ಪೂರ್ವಮಕಲ್ಪಯೇತ್' ಎಂದು ಈ ಕಥೆ ಈ ಕಲ್ಪಕ್ಕೆ ಸಲ್ಲದು ಎಂದು ನಮಿಸಿ ಸುಮ್ಮನಿರುವುದೇ ಸಮನ್ವಯ.

4. ಭರತನು ಸಾಂತವಾಗಿ ಪ್ರಯೋಗಿಸಿದನೆಂದು ಹೇಳುವ ಎರಡು ನಾಟಕಗಳೆಲ್ಲಾ ಅಮೃತಮಥನವೆನ್ನುವುದು ಸಮವಕಾರ, ತ್ರಿಪುರದಾಹವೆನ್ನುವುದು ಡಿಮ. ಇವೆರಡೂ ನಾಲ್ಕಂಕಗಳ ನಾಟಕಗಳು. ಆದರೆ ಭರತನೇ ಮೊದಲ ಸಮವಕಾರವನ್ನು 'ಕರ್ಮಭಾವ ಸುದರ್ಶನ' ಎಂದು ಹೇಳಿ, ಮೂಕ ನಾಟಕ ಎಂದು ತೀರ್ಮಾನಿಸಿದ. ಎರಡನೆಯದಾದ ಡಿಮವನ್ನು ಕರ್ಮಾನುಭಾವ ಕೀರ್ತನೆ ಎಂದು ಹೇಳುತ್ತ ತುಸು ವಾಚಿಕಾಭಿನಯವಿರುವ ನಾಟಕವೆಂದು ಅಂಗೀಕರಿಸಿದನು. ಆದರೆ ಈ ಕೀರ್ತನೆಯೆನ್ನುವುದು ಪದ್ಯವೋ ಹಾಡೋ, ತಾಳ್ಳಪಾಕದವರ ವಚನಗಳಂತೆ ಗದ್ಯಗೇಯಗಳೋ ಆತ ಸ್ಪಷ್ಟವಾಗಿ ಹೇಳಲಿಲ್ಲ. ಆದರೂ ಆಡಿದ್ದು ನಾಟಕವೆಂದೂ ಅದರಲ್ಲಾ ಕ್ರಮಕ್ರಮಾಭಿವೃದ್ಧಿಯನ್ನು ತೋರಿಸಿದನೆಂದೂ ತಿಳಿದು ಬರುತ್ತದೆ. ಈ ಕಥೆಯಾಗಲೀ, ಈ ನಾಟ್ಯವೇದವಾಗಲೀ, ಭರತನ ಈ ನಾಟ್ಯ ಪ್ರಯೋಗಗಳಾಗಲೀ ಇಂದು ನಾವು ನೋಡುತ್ತಿರುವ ನಾಟಕಗಳ ಚರಿತ್ರೆಗೆ ಇದ್ದೂ ಇಲ್ಲದ ಸಂಬಂಧ ಹೊಂದಿರುವುದೇ ಹೊರತು ನೃತ್ಯಾದಿಗಳ ಆನುಪೂರ್ವಿಗೆ ಮಾತ್ರ ಸಂಬಂಧವಿಲ್ಲದವು ಎನ್ನುವುದು ಸ್ಪಷ್ಟ. ಅವು ಆ ಮೊದಲೇ ಇದ್ದವು. ಅವನ್ನೇ ಶಿವನು ನಂತರದಲ್ಲಿ ಈ ನಾಟಕಗಳಲ್ಲಿ ಜೋಡಿಸಿದ್ದು. ಎಂತಲೇ ದಶರೂಪಕಕಾರನು 'ಲಾಸ್ಯ ತಾಂಡವ ರೂಪೇಣ ನಾಟಕಾದ್ಯುಪಕಾರಕಂ' ಎಂದು ಹೇಳಿ ಅದು ಬೇರೆ, ಇದು ಬೇರೆ ಎಂದು ಸಿದ್ಧಮಾಡಿ ತೋರಿಸಿದ. ಅಲ್ಲದೆ ಆಟ ಹಾಡುಗಳೆಂಬುವುವು ಮೊದಲಿಗೆ ಮಾನವನಲ್ಲಿ ವ್ಯಕ್ತವಾಗಿದ್ದಿತೆಂದೂ, ಬರು ಬರುತ್ತ ಮಾನವನ ಅನವರತ ಪ್ರಯತ್ನದಿಂದ ಅವು ಕಲೆಗಳಾಗಿ ಪರಿವರ್ತಿತವಾದವೆಂದೂ, ಇರುವ ಕಲೆಗಳೆಲ್ಲವನ್ನೂ ಒಂದೆಡೆ ಸೇರಿಸಿ ರಂಗಸ್ಥಲದಲ್ಲಿ ಕಥೆಗೆ ಪ್ರಾಧಾನ್ಯತೆ ನೀಡಿ ಪ್ರಯೋಗಿಸಿದ ಪ್ರಥಮ ಪ್ರಯತ್ನವೇ ಭರತನ ದೇವಲೋಕ ನಾಟ್ಯದಲ್ಲಿ ಕಾಣಿಸಿತೆಂದೂ ಇದ್ದರಿಂದ ತೀರ್ಮಾನಿಸಬಹುದು.

---

# ಭರದ್ವಾಜಾತಿಥ್ಯ

ಭಾರತೀಯರು ವಿಶೇಷ ಉದಾರಶೀಲರು. ಅವರಿಗೆ ಅತಿಥಿಗಳು ದೇವಸಮಾನರು. ಅತಿಥಿಗಳನ್ನು ಸತ್ಕರಿಸುವುದು ಅವರಿಗೆ ಪರಮ ಪವಿತ್ರವಾದ ಕಾರ್ಯ. ಅದನ್ನು ಅವರು ಬಹು ಸಂತೋಷದಿಂದ ನೆರವೇರಿಸುತ್ತಾರೆ. 'ಅತಿಥಿದೇವೋಭವ' 'ಅತಿಥೀ ಚ ಅಪವಾದೀ ಚ ದ್ವಾವೇತೌ ಮಮ ಬಾಂಧವೌ' ಎಂಬ ಉಕ್ತಿಗಳು ಅವರ ಈ ಮನೋಭಾವವನ್ನು ಬಹು ಸ್ಪಷ್ಟವಾಗಿ ವಿಶದೀಕರಿಸುತ್ತವೆ. 'ಏಕಃ ಸ್ವಾದು ನ ಭುಂಜೀತ' (ಮಧುರವಾದುದನ್ನು ತಾನೊಬ್ಬನೇ–ಮತ್ತೊಬ್ಬರಿಗೆಕೊಡದೆ ಭೋಗಿಸಬಾರದು.) ಎಂಬ ವಾಕ್ಯವು ಇದಕ್ಕೆ ಉಪಷ್ಟಂಭವಾಗಿದೆ. ಅದು ಇಂದಿಗೂ ಭಾರತೀಯರ ರಕ್ತನಾಳದಲ್ಲಿ ಏಕಪ್ರಕಾರವಾಗಿ ಹರಿಯುತ್ತಿದೆ. ಪ್ರಾಚೀನ ಕಾಲದಲ್ಲಂತೂ ಅದು ಬಹುವೈಭವದಿಂದ ನಡೆಯುತ್ತಿತ್ತು. ಅತಿಥಿಯನ್ನು ಕಂಡ ತಕ್ಷಣವೇ ಅವನಿಗೆ ಅರ್ಘ್ಯಪಾದ್ಯ ಆಚಮನಗಳನ್ನಿತ್ತು ಮಧುಪರ್ಕವನ್ನು ದಾನಮಾಡುವುದು ಅನೇಕ ಪ್ರಾಚೀನ ಗ್ರಂಥಗಳಲ್ಲಿ ಉಕ್ತವಾಗಿದೆ. ಅದರ ವೈಭವವನ್ನು ಶ್ರೀಮದ್ರಾಮಾಯಣದ ಅಯೋಧ್ಯಾಕಾಂಡದಲ್ಲಿ ಬರುವ ಭರದ್ವಾಜಾತಿಥ್ಯದಲ್ಲಿ ಬಹು ಶ್ರೀಮಂತವಾಗಿ ಕಾಣಬಹುದು.

ರಾಮನು ಚಿತ್ರಕೂಟದಲ್ಲಿರುವಾಗ ಅವನನ್ನು ಹಿಂದಕ್ಕೆ ಅಯೋಧ್ಯೆಗೆ ಕರೆದುಕೊಂಡು ಬರುವುದಕ್ಕಾಗಿ ಸಕಲ ಪರಿವಾರದೊಡನೆ ಕಾಡಿಗೆ ಬರುವಾಗ ಭರತನಿಗೆ ದಾರಿಯಲ್ಲಿ ಭರದ್ವಾಜಾಶ್ರಮವು ಸಿಕ್ಕುವುದು. ಅವರನ್ನು ಸಂಧಿಸಿ ಅವರಿಂದ ರಾಮನಿರುವ ಸ್ಥಳವನ್ನು ತಿಳಿಯಬೇಕೆಂದು ಭರತನು ಭರದ್ವಾಜರನ್ನು ಸಂದರ್ಶಿಸಲು ಯೋಚಿಸುತ್ತಾನೆ. ಅವನ ಜೊತೆಯಲ್ಲಿ ಅಪಾರವಾದ ಚತುರಂಗಸೈನ್ಯವೂ ಅಮಾತ್ಯಾದಿ ಪರಿವಾರಗಳೂ ಬಹುಸಂಖ್ಯೆಯಲ್ಲಿ ಬಂದಿರುತ್ತಾರೆ. ತಪೋವನಕ್ಕೆ ಭಂಗವುಂಟಾಗಬಾರದೆಂಬ ಅಭಿಪ್ರಾಯದಿಂದ ಅವರನ್ನೆಲ್ಲಾ ಹಿಂದೆಯೇ ಬಿಟ್ಟು ವಸಿಷ್ಠರನ್ನು ಮುಂದಿರಿಸಿಕೊಂಡು ಭರತನು ಭರದ್ವಾಜರನ್ನು ಕಾಣುತ್ತಾನೆ. ವಸಿಷ್ಠರ ಮೂಲಕ ಪರಸ್ಪರ ಪರಿಚಯವಾಗುತ್ತದೆ. ಭರದ್ವಾಜರು ತ್ರಿಕಾಲಜ್ಞಾನಿಗಳು. ಅವರಿಗೆ ಅಯೋಧ್ಯೆಯಲ್ಲಿ ನಡೆದಿರುವುದೆಲ್ಲ ತಿಳಿದಿದೆ, ಆದರೂ ಭರತನ ಇಂಗಿತವನ್ನು ತಿಳಿಯುವುದಕ್ಕಾಗಿ ಅವನನ್ನು ಪ್ರಶ್ನಿಸಿ ಅವನು ರಾಮನನ್ನು ಅಯೋಧ್ಯೆಗೆ ಕರೆದು ತರುವುದಕ್ಕಾಗಿ ಬಂದಿರುವುದನ್ನು ತಿಳಿದು ವಿಶೇಷ ಸಂತೋಷಪಟ್ಟು ಅವನ ನಡತೆಯನ್ನು ವಿಶೇಷವಾಗಿ ಶ್ಲಾಘಿಸಿ ಅವನು ತನ್ನ ಸಮಸ್ತಪರಿವಾರದೊಡನೆ ಆ ರಾತ್ರಿ ಅಲ್ಲಿಯೇ ಇದ್ದು ಮಾರನೆಯದಿನ ಆತಿಥ್ಯವನ್ನು ಸ್ವೀಕರಿಸಿ ಮುಂದೆ ಹೋಗಬೇಕೆಂದೂ ಆಹ್ವಾನಿಸುತ್ತಾರೆ ಅವರ ಬಲವಂತದಿಂದ ಭರತನು ಒಪ್ಪಿ ತನ್ನ ಸಮಸ್ತಪರಿವಾರವನ್ನು ಬರ ಮಾಡಿ ಆತಿಥ್ಯಕ್ಕೆ ಸಿದ್ಧನಾಗುವನು.

ಭರತನ ಪರಿವಾರ ಅಸಂಖ್ಯಾಕವಾದದು. ಭರತನು ಆಗ ಚಕ್ರವರ್ತಿ ಸ್ಥಾನದಲ್ಲಿ ಬಂದಿರುವನು. ಅವನಿಗೆ ಯೋಗ್ಯವಾದ ಸತ್ಕಾರವನ್ನು ಮಾಡಬೇಕು. ಅದಕ್ಕನುಗುಣವಾದ ಪೂರ್ವಸಿದ್ಧತೆಗಳನ್ನು ಬಹು ಉತ್ಸಾಹದಿಂದ ಭರದ್ವಾಜರು ಕೈಗೊಂಡರು.

ಅವರು ಅಗ್ನಿಶಾಲೆಯನ್ನು ಪ್ರವೇಶಿಸಿ ಶುದ್ಧಾಚಮನವನ್ನು ಮಾಡಿ ಅತಿಥಿಸತ್ಕಾರವನ್ನು ಮಾಡುವುದಕ್ಕಾಗಿ ಮಂತ್ರಪೂರ್ವಕವಾಗಿ ಮಹಾಶಿಲ್ಪಿಯಾದ ವಿಶ್ವಕರ್ಮವನ್ನು ಆಹ್ವಾನಮಾಡಿದರು. ಯಮ ವರುಣ ಕುಬೇರರೆಂಬ ಮೂರು ದಿಕ್ಪಾಲರುಗಳನ್ನು ಇಂದ್ರಾದಿ, ದೇವತೆಗಳನ್ನು ಆಮಂತ್ರಿಸಿದರು. ಭೂಮ್ಯಂತರಿಕ್ಷಗಳಲ್ಲಿ ಪೂರ್ವಗಾಮಿಗಳೂ ಪಶ್ಚಿಮಗಾಮಿಗಳೂ ಆದ ಸಕಲ ನದೀದೇವತೆಗಳನ್ನು ಪ್ರಾರ್ಥಿಸಿದರು. ಅವರಲ್ಲಿ ಕೆಲವರು ಖರ್ಜೂರಾದಿ ಫಲಗಳಿಂದ ಹುಟ್ಟುವ ಮೈರೇಯವೆಂಬ ಮದ್ಯವನ್ನು ಮತ್ತು ಕೆಲವರು ಗೌಡಿ, ಪೈಷ್ಟೀ, ಮಾಧ್ವೀ ಎಂಬ ಸುರೆಯನ್ನು, ಇನ್ನು ಕೆಲವರು ಕಬ್ಬಿನ ಹಾಲಿನಂತಿರುವ ಸಿಹಿ ನೀರನ್ನೂ ಒದಗಿಸ ಬೇಕೆಂದು ಕೇಳಿದರು. ದೇವಗಂಧರ್ವರಾದ ವಿಶ್ವಾವಸು, ಹಾಹಾ, ಹೂಹೂ ಎಂಬ ಗಾಯಕರನ್ನು ಆಹ್ವಾನಿಸಿದರು. ದೇವಜಾತಿಗೂ ಗಂಧರ್ವಜಾತಿಗೂ ಸೇರಿದ ಅಪ್ಸರೆಯರನ್ನು ಕರೆದರು. ಘೃತಾಚಿ, ವಿಶ್ವಾಚಿ, ಮಿಶ್ರಕೇಶಿ, ಅಲಂಬುಸೆ, ನಾಗದಂತೆ, ಹೇಮೆ, ಹಿಮೆ ಅಧಿಕೃತಸ್ಥಲಿ ಎಂಬ ಅಪ್ಸರೆಯರನ್ನು ಇಂದ್ರ ಬ್ರಹ್ಮ ಮೊದಲಾದವರನ್ನು ಸೇವಿಸುವ ತರುಣಿಯರನ್ನು ತಮ್ಮ ನೃತ್ಯಗೀತ ಸಾಮಗ್ರಿಗಳೊಡನೆ ಬರಬೇಕೆಂದು, ಹಾಗೆಯೇ ಉತ್ತರ ಕುರುದೇಶದಲ್ಲಿರುವ ಕುಬೇರನ ಚೈತ್ರರಥವೆಂಬ ಉದ್ಯಾನವು ವಸ್ತ್ರಭೂಷಣಗಳೆಂಬ ಪತ್ರಗಳಿಂದಲೂ ದಿವ್ಯಸ್ತ್ರೀಯರೆಂಬ ಫಲಗಳಿಂದಲೂ ಕೂಡಿ ಬರಬೇಕೆಂದೂ, ಓಷಧೀಶ್ವರನಾದ ಸೋಮನು ಭಕ್ಷ್ಯ, ಭೋಜ್ಯ, ಚೋಷ್ಯ ಲೇಹ್ಯಗಳೇ ಮೊದಲಾದ ವಿವಿಧ ಖಾದ್ಯವಸ್ತುಗಳನ್ನು ವಿಚಿತ್ರವಾದ ಹೂವಿನ ಮಾಲೆಗಳನ್ನು ನಾನಾವಿಧವಾದ ಪೇಯಗಳನ್ನು ಮಾಂಸಗಳನ್ನು ಸಿದ್ಧಪಡಿಸಬೇಕೆಂದೂ ಭರದ್ವಾಜರು ಶಾಸ್ತ್ರೋಕ್ತವಾಗಿ ಜಪಮಾಡಿದರು. ಆಹ್ವಾನಿತವಾದ ದೇವತೆಗಳೆಲ್ಲ ಪ್ರತ್ಯೇಕವಾಗಿ ಆಶ್ರಮಕ್ಕೆ ಬಂದುಸೇರಿದರು. ಬೆಟ್ಟಗಳ ಮೇಲ್ ಬೀಸಿ ಬಂದ ತಂಗಾಳಿಯು ಸೈನಿಕರ ಶ್ರಮವನ್ನು ಪರಿಹಾರಮಾಡಿತು. ನಿರಂತರವಾಗಿ ಪುಷ್ಪವೃಷ್ಟಿಯಾಯಿತು. ದಿವ್ಯನಾದವು ದಿಕ್ಕುಗಳನ್ನೆಲ್ಲ ಆವರಿಸಿತು–ಅಪ್ಸರೆಯರು ನೃತ್ಯಮಾಡಿದರು. ಗಂಧರ್ವರು ಗಾನಮಾಡಿದರು. ನಾನಾ ರೀತಿಯ ಗೀತಧ್ವನಿಯು ಶ್ರುತಿಲಯಾನ್ವಿತವಾಗಿ ಎಲ್ಲರನ್ನೂ ಆಕರ್ಷಿಸಿತು. ಐದು ಯೋಜನಗಳ ಸಮತಲ ಭೂಮಿ ನಿರ್ಮಾಣವಾಯಿತು. ಇಂದ್ರನೀಲಮಣಿಯಂತೆಯೂ ವೈಢೂರ್ಯದಂತೆಯೂ ಹೊಳೆಯುತ್ತಿರುವ ಹಸಿರು ಹುಲ್ಲು ಬೆಳೆಯಿತು. ಬಿಲ್ವ, ಬೇಲ ಹಲಸು, ದಾಳಿಂಬೆ, ನೆಲ್ಲಿ ಮತ್ತು ಮಾವಿನ ಮರಗಳು ಹಣ್ಣುಗಳಿಂದ ತುಂಬಿದವು, ಭೋಗಸಾಮಗ್ರಿಗಳನ್ನುಳ್ಳ ಚಿತ್ರರಥವೆಂಬ ರಥವು ಪ್ರತ್ಯಕ್ಷವಾಯಿತು. ತೀರವೃಕ್ಷಗಳಿಂದ ಕೂಡಿದ ದಿವ್ಯನದಿಗಳು ಹರಿಯ ತೊಡಗಿದುವು. ಶುಭ್ರವಾದ ಚಚ್ಚೌಕದ ಕೈಸಾಲೆಗಳೂ, ಆನೆ, ಕುದುರೆಗಳ ಲಾಯಗಳೂ ಹರ್ಮ್ಯ ಪ್ರಾಸಾದಗಳೂ ಸುಂದರವಾದ ತೋರಣಗಳೂ ಕಾಣಿಸಿಕೊಂಡವು. ಬಳಿಯ ಮೋಡದಂತೆ ಉನ್ನತವಾಗಿ ಬೆಳಗುವ ಒಂದು ರಾಜಭವನವು ತೋರಣದಿಂದಲೂ ಪುಷ್ಪಮಾಲೆಗಳಿಂದಲೂ ವಿರಾಜಮಾನವಾಯಿತು. ಅದರಲ್ಲಿ ಉತ್ತಮವಾದ ಹಾಸಿಗೆ ಪೀಠ ಪಲ್ಲಕ್ಕಿಗಳೂ ಇದ್ದವು. ಷಡ್ರಸೋಪೇತವಾದ ಪದಾರ್ಥಗಳಿಂದಲೂ ದಿವ್ಯವಸ್ತ್ರಗಳಿಂದಲೂ ಆ ಭವನವು ತುಂಬಿತ್ತು. ಮೃಷ್ಟಾನ್ನವೂ ಸಿದ್ಧವಾಗಿದ್ದಿತು. ಶುಭ್ರವಾದ ಭೋಜನ ಪಾತ್ರೆಗಳಿದ್ದುವು. ಆಸನಗಳು ಬಹು ಅಚ್ಚುಕಟ್ಟಾಗಿ ಅಣಿಮಾಡಲ್ಪಟ್ಟಿದ್ದುವು. ಉತ್ತಮವಾದ ಹಾಸಿಗೆಗಳು ಹಾಸಿದ್ದವು. ಭರದ್ವಾಜರ ಅಪ್ಪಣೆಯ ಪ್ರಕಾರ ಆಜಾನುಬಾಹುವಾದ ಭರತನು ರತ್ನಖಚಿತವಾದ ಆ ಭವನವನ್ನು ಪ್ರವೇಶಿಸಿದನು. ಎಲ್ಲ ಮಂತ್ರಿಗಳೂ ಪುರೋಹಿತರೂ ಅವನನ್ನು ಹಿಂಬಾಲಿಸಿದರು. ಎಲ್ಲರೂ ಆ ಭವನದ ವೈಭವವನ್ನು ನೋಡಿ ಆಶ್ಚರ್ಯಗೊಂಡರು. ಅಲ್ಲಿ ಒಂದು ರಾಜಸಿಂಹಾಸನವೂ ಛತ್ರ ಚಾಮರಗಳಿಂದ ಶೋಭಾಯಮಾನವಾಗಿತ್ತು. ಭರತನು ಆ ಸಿಂಹಾಸನಕ್ಕೆ ರಾಮನನ್ನು ಧ್ಯಾನಿಸಿಕೊಂಡು ನಮಸ್ಕರಿಸಿ ಮಂತ್ರಸಹಿತವಾಗಿ ಪ್ರದಕ್ಷಿಣೆ ಮಾಡಿದನು. ಚಾಮರವನ್ನೆತ್ತಿ ಬೀಸಿದನು. ಎಲ್ಲರೂ

ಯಥಾಯೋಗ್ಯವಾದ ಆಸನಗಳಲ್ಲಿ ಮಂಡಿಸಿದರು. ಸಾವಕಾಶವಿಲ್ಲದೆ ಭರದ್ವಾಜರ ಆಜ್ಞೆಯ ಮೇರೆಗೆ ಭರತಾದಿಗಳ ಮುಂದುಗಡೆ ಹಾಲಿನ ಹೊಳೆ ಹರಿದುವು. ಅವುಗಳ ಪಕ್ಕದಲ್ಲಿ ಸುಧಾಧವಳಿತವಾದ ರಮ್ಯಭವನಗಳು ಕಾಣಿಸಿಕೊಂಡವು. ತಕ್ಷಣ ಬ್ರಹ್ಮನು ಕಳುಹಿಸಿದ ಇಪ್ಪತ್ತುಸಾವಿರ ಸುಂದರ ಸ್ತ್ರೀಯರು ದಿವ್ಯಾಭರಣಭೂಷಿತರಾಗಿ ಬಂದು ಸೇರಿದರು. ನಂದನವನದಿಂದ ಇಪ್ಪತ್ತು ಸಾವಿರ ಅಪ್ಸರ ಸ್ತ್ರೀಯರು ಬಂದು ಬಡಿಸುವುದರಲ್ಲಿ ಭಾಗಿಗಳಾದರು. ಅವರು ತಮ್ಮನ್ನು ಆಲಂಗಿಸಿದವರಿಗೆ ಹುಚ್ಚುಹಿಡಿಸುವಷ್ಟು ಸೌಂದರ್ಯದಿಂದ ಕೂಡಿದ್ದರು. ಸೂರ್ಯನಂತೆ ವರ್ಚಸ್ವಿಗಳಾದ ನಾರದ, ತುಂಬರ, ಗೋಪ ಎಂಬ ಗಂಧರ್ವ ಶ್ರೇಷ್ಠರು ಭರತನ ಮುಂದೆ ಹಾಡಿದರು. ಅಲಂಬಸೆ, ಮಿಶ್ರಕೇಶಿ, ಪುಂಡರೀಕೆ, ವಾಮನೆ ಎಂಬ ಅಪ್ಸರೆಯರು ನರ್ತನ ಮಾಡಿದರು. ದೇವಲೋಕದ ನಂದನವನದ ಮತ್ತು ಕುಬೇರನ ಚೈತ್ರರಥವೆಂಬ ತೋಟದ ಹೂಗಳೆಲ್ಲ ಅಲ್ಲಿ ಗೋಚರಿಸಿದುವು. ಬಿಲ್ವವೃಕ್ಷಗಳು ಮನುಷ್ಯ ರೂಪವನ್ನು ತಾಳಿ ಮೃದಂಗವನ್ನು ಬಾರಿಸಿದುವು. ತಾಳೆಯ ವೃಕ್ಷಗಳು ತಾಳವನ್ನು ಹಾಕಿದುವು. ಅರಳೀಮರಗಳು ನಾಟ್ಯಮಾಡಿದುವು. ತರಳ, ತಾಲ, ತಿಲಕ, ರಕ್ತಮಾಲಕವೆಂಬ ಮರಗಳೂ ಕುಬ್ಜರೂ ವಾಮನರೂ ಆಗಿ ಸೇವೆಮಾಡಿ ಶಿಂಶುಪಾ, ಜಂಬು, ಆಮಲಕಾದಿ ವೃಕ್ಷಗಳು ಸ್ತ್ರೀವೇಷವನ್ನು ಧರಿಸಿ ಆಶ್ರಮದಲ್ಲಿ ಅಡ್ಡಾಡಿ ಭರತನ ಸೈನಿಕರನ್ನು ಕುರಿತು 'ಮದ್ಯ ಬೇಕಾದವರು ಬೇಕಾದಷ್ಟು ಮದ್ಯಪಾನ ಮಾಡಿ, ಹಸಿವಾದವರು ಪಾಯಸವನ್ನು ಕುಡಿಯಿರಿ, ಬೇಕಾದಷ್ಟು ಮಾಂಸವನ್ನು ಭಕ್ಷಿಸಿ' ಎಂದು ಹೇಳುತ್ತಾ ಬಡಿಸಿದವು. ಅನೇಕ ಸ್ತ್ರೀಯರು ರಮ್ಯವಾದ ನದೀತೀರದಲ್ಲಿ ಏಳೆಂಟು ಮಂದಿ ಸೇರಿಕೊಂಡು ಸೈನಿಕರಿಗೆ ಸ್ನಾನ ಮಾಡಿಸಿದರು. ಮೈಯ್ಯಾರಿಸಿದರು, ಪಾನಮಾಡಿಸಿದರು. ಕೆಲವರು ಕುದುರೆ, ಆನೆ, ಕತ್ತೆ ಮೊದಲಾದ ವಾಹನಗಳಿಗೆ ಆಹಾರವನ್ನಿತ್ತು ಉಪಚರಿಸಿದರು. ಅವುಗಳಿಗೆ ಉತ್ತಮವಾದ ಜೇನಿನಿಂದ ಕೂಡಿದ ಅರಳು ಕಬ್ಬು ಮೊದಲಾದ ಪದಾರ್ಥಗಳನ್ನು ಯಥೇಚ್ಛವಾಗಿ ತಿನ್ನಿಸಿದರು. ಭರತನ ಸೈನಿಕರು ಕಂಠಪೂರ್ತಿಯಾಗಿ ತಿಂದು ಕುಡಿದು ಮೈಮರೆತು ನಲಿದಾಡಿದರು. ವಾಹಕರಿಗೆ ತಮ್ಮ ತಮ್ಮ ವಾಹನಗಳನ್ನು ಗುರುತಿಸಲಾಗಲಿಲ್ಲ. ಅವರು ಬೇಕಾದಷ್ಟು ಭೋಗಗಳನ್ನನುಭವಿಸಿ, ಸುಗಂಧದ್ರವ್ಯಗಳನ್ನು ಲೇಪಿಸಿಕೊಂಡು ಅಪ್ಸರೆಯರೊಂದಿಗೆ ನಲಿದಾಡಿದರು. ಭರತನ ಸೈನಿಕರು ಅತ್ಯಂತ ತೃಪ್ತರಾಗಿ 'ನಾವು ಅಯೋಧ್ಯೆಗೂ ಹೋಗುವುದಿಲ್ಲ, ದಂಡಕಾರಣ್ಯಕ್ಕು ಹೋಗುವುದಿಲ್ಲ, ಭರತನಿಗೂ ರಾಮನಿಗೂ ಒಳ್ಳೆಯದಾಗಲಿ' ಎಂದು ತಮಗೆ ನಾಯಕರೇ ಇಲ್ಲದಂತೆ ಬಾಯಿಗೆ ಬಂದ ಹಾಗೆ ಹರಟುತ್ತಿದ್ದರು. 'ಸ್ವರ್ಗವೆಂದರೆ ಇದೇ' ಎಂದು ಘೋಷಿಸಿದರು. ಅವರು ಹೂಮಾಲೆಗಳನ್ನು ಧರಿಸಿ ಗುಂಪುಗುಂಪಾಗಿ ಸೇರಿ ಕುಣಿದರು, ನಕ್ಕರು, ಹಾಡಿದರು. ಕೆಲವರಂತೂ ಅಲ್ಲಿಂದಿಲ್ಲಿಗೆ ವೇಗದಿಂದ ಓಡಾಡಿದರು. ಮುಗಿಯದ ಆ ಭಕ್ಷ್ಯ ಭೋಜ್ಯ ರಾಶಿಗಳನ್ನು ನೋಡಿ ಪುನಃ ಪುನಃ ತಿಂದರು.

ಆ ಸೇನೆಯಲ್ಲಿದ್ದ ಪರಿಚಾರಕರೂ ದಾಸಿಯರೂ ಯೋಧರೂ ಸ್ತ್ರೀಯರೂ ಸಾವಿರ ಸಂಖ್ಯೆಯಲ್ಲಿ ತಿಂದು ತೇಗಿ ತೃಪ್ತರಾದರು. ಎಲ್ಲರೂ ಹೊಸ ಬಟ್ಟೆಗಳನ್ನು ಧರಿಸಿದ್ದರು. ಆನೆ, ಒಂಟೆ, ಕುದುರೆ ಮೊದಲಾದ ಪ್ರಾಣಿರಾಶಿ ಪರಿಪೂರ್ಣವಾಗಿ ತೃಪ್ತಿಗೊಂಡವು. ಅಲ್ಲಿ ಸ್ವಚ್ಛವಲ್ಲದವಸ್ತ್ರ

ಡಾ॥ ಎನ್. ಅನಂತರಂಗಾಚಾರ್

ಧರಿಸಿದವರಾಗಲೀ ಹಸಿದವನಾಗಲೀ ಕೊಳಕು ಬಟ್ಟೆಗಳಿಂದ ಕೂಡಿದವರಾಗಲೀ ಯಾರು ಇರಲಿಲ್ಲ. ಎಲ್ಲರೂ ಕೇಶಾಲಂಕಾರ ಮಾಡಿಕೊಂಡಿದ್ದರು. ಚಿತ್ರ ಖಚಿತವಾದ ಸಾವಿರಾರು ಸುವರ್ಣ ಪಾತ್ರೆಗಳಲ್ಲಿ ವಿಧ ವಿಧವಾದ ಆಹಾರ ಪದಾರ್ಥಗಳು ತುಂಬಿದ್ದವು. ಒಂದು ಕಡೆ ಮೇಕೆಯ ಮಾಂಸ ಇನ್ನೊಂದು ಕಡೆ ಹಂದಿಯ ಮಾಂಸ, ಮತ್ತೊಂದು ಕಡೆ ತರಕಾರಿಗಳಿಂದ ಮಾಡಿದ ಪದಾರ್ಥಗಳ ರಾಶಿ, ಇನ್ನೊಂದು ಕಡೆ ನಾನಾ ರೀತಿಯ ಹಣ್ಣಿನ ರಸಗಳು ಬೇರೊಂದು ಕಡೆ ಗಮಗಮಿಸುವ ತೊವ್ವೆಗಳ ರಾಶಿ, ಅವುಗಳ ಮಧ್ಯದಲ್ಲಿ ಹೂವುಗಳಿಂದ ಅಲಂಕರಿಸಿದ ಪಾತ್ರೆಗಳಲ್ಲಿ ತುಂಬಿದ ಅನ್ನದ ರಾಶಿ–ಈ ವೈಭವನ್ನು ಕಂಡು ಆ ಜನರು ಆಶ್ಚರ್ಯಚಕಿತರಾದರು. ಅಲ್ಲದೆ ಅಲ್ಲಿದ್ದ ಅನೇಕ ಬಾವಿಗಳು ಪಾಯಸದಿಂದ ತುಂಬಿದ್ದವು. ಹಸುಗಳೆಲ್ಲ ಕಾಮಧೇನುಗಳಾಗಿದ್ದವು. ಮರಗಳು ಜೇನನ್ನು ಸುರಿಸುತ್ತಿದ್ದವು. ಹಳ್ಳಗಳೆಲ್ಲ ಮದ್ಯದಿಂದ ಪೂರಿತವಾಗಿದ್ದವು. ಅವುಗಳ ಸುತ್ತಲೂ ರುಚಿಕರವಾದ ಮಾಂಸದ ರಾಶಿ, ತಟ್ಟೆಗಳಲ್ಲಿ ಜಿಂಕೆ ನವಿಲು ಕೋಳಿಯ ಮಾಂಸಗಳು, ಸಾವಿರ ಭೋಜನ ಪಾತ್ರೆಗಳು, ಲಕ್ಷೋಪಲಕ್ಷಸ್ಥಾಲಿಗಳೂ ಕೋಟಿಗಟ್ಟಲೆ ತಟ್ಟೆಗಳೂ ಇದ್ದವು. ಎಲ್ಲವೂ ಸುವರ್ಣಮಯವಾದುವು. ಸುಗಂಧಪರಿಕರಗಳಿಂದ ಕೂಡಿದ ಕೆನೆಮೊಸರನ್ನು ತುಂಬಿದ ವಿವಿಧಾಕಾರದ ಪಾತ್ರೆಗಳು ಅಲ್ಲಿದ್ದವು. ಆಗ ತಾನೆ ಕಡೆದು ಸುವಾಸನೆಯಿಂದ ಕೂಡಿದ ಮಜ್ಜಿಗೆಯೂ ಯಥೇಷ್ಟವಾಗಿತ್ತು. ಒಂದು ಕಡೆ ಏಲಕ್ಕಿ ಲವಂಗಾದಿಗಳಿಂದ ಕೂಡಿದ ಮಜ್ಜಿಗೆಯ ಮಡುಗಳು, ಇನ್ನೊಂದು ಕಡೆ ಮೊಸರಿನ ಕೊಳಗಳು, ಮತ್ತೊಂದು ಕಡೆ ಪಾಯಸದ ಹೊಂಡಗಳು, ಬೇರೊಂದು ಕಡೆ ಗೋಧಿಯಿಂದ ಮಾಡಿದ ಭಕ್ಷ್ಯರಾಶಿ. ಕೆಲವು ಪಾತ್ರೆಗಳಲ್ಲಿ ಚಟ್ನಿ ಉಪ್ಪಿನ ಕಾಯಿಗಳು ತುಂಬಿದ್ದವು. ಒಂದು ಮೂಲೆಯಲ್ಲಿ ಸ್ನಾನಯೋಗ್ಯವಾದ ವಿವಿಧ ಚೂರ್ಣಗಳೂ ಸುಗಂಧ ಕಷಾಯಗಳೂ ಬಿಸಿನೀರೂ ಸಿದ್ಧವಾಗಿದ್ದವು. ಶುಭ್ರವಾಗಿ ನಯವಾಗಿರುವ ಹಲ್ಲುಜ್ಜುವ ಸಾಮಗ್ರಿಗಳೂ ಬಟ್ಟಲುಗಳಲ್ಲಿ ತೇದು ಸಿದ್ಧಪಡಿಸಿದ ಶ್ರೀಗಂಧದ ಕಲ್ಕಗಳೂ ಹೇರಳವಾಗಿದ್ದವು. ಅಲ್ಲಲ್ಲೆ ಶುಭ್ರವಾದ



ಲೇಪಾಕ್ಷಿಯ ಒಂದು ಶಿಲ್ಪ. ಚಿತ್ರ : ಸೋಮಶೇಖರ್.

ಕನ್ನಡಿಗಳಿದ್ದವು. ನಿರ್ಮಲ ವಸ್ತ್ರಗಳ ರಾಶಿಗಳನ್ನು ಅಲ್ಲಿ ನೋಡಬಹುದಾಗಿತ್ತು. ಮರದ ಮತ್ತು ಚರ್ಮದ ಪಾದುಕೆಗಳು ಜೊತೆ ಜೊತೆಯಾಗಿ ಸಾವಿರಗಟ್ಟಲೆ ಪೇರಿಸಿತ್ತು. ಕಾಡಿಗೆಯ ಭರಣಿ (ಕಣ್‌ಕಪ್ಪು) ಬಾಚಣಿಗೆ ಕೂರ್ಚ (ಬ್ರಷ್) ಶಸ್ತ್ರ, ಧನಸ್ಸು, ಕವಚ, ಹಾಸಿಗೆ, ಆಸನಗಳು ಲೆಕ್ಕವಿಲ್ಲದಷ್ಟಿದ್ದವು. ಭೋಜನಾಂತರದ ಪಾನೀಯಗಳೂ ಅತ್ಯಧಿಕವಾಗಿದ್ದವು. ಕತ್ತೆ, ಕುದುರೆ, ಒಂಟೆ, ಆನೆ–ಮೊದಲಾದವು ಇಳಿದು ಸ್ನಾನಮಾಡಲು ಯೋಗ್ಯವಾದ ಅನೇಕ ರಮಣೀಯ ಸರೋವರಗಳಿದ್ದವು. ಅವುಗಳಲ್ಲಿ ಸ್ವಚ್ಛವಾದ ತಿಳಿ ನೀರು ತಂಬಿರುತ್ತಿದ್ದವು. ಮತ್ತೊಂದು ಕಡೆ ಪಶುಗಳಿಗೆ ಪ್ರಿಯವಾಗಿರುವ ಸೊಗಸಾದ ಗರಿಕೆಯ ಹುಲ್ಲು ಬೆಳೆದಿತ್ತು. ಸ್ವಪ್ನದಂತಿದ್ದ ಈ ಸನ್ನಿವೇಶವನ್ನು ನೋಡಿ ಭರತನ ಸೈನಿಕರು ಬೆಕ್ಕಸ ಬೆರಗಾದರು. ನಂದನವನಗಳಲ್ಲಿ ವಿಹರಿಸುವಂತೆ ಭರತನ ಪರಿವಾದವರು ರಮ್ಯವಾದ ಆ ಭರದ್ವಾಜಾಶ್ರಮದಲ್ಲಿ ಮನಸ್ಸು ತೃಪ್ತಿಯಾಗುವಷ್ಟು ವಿಹರಿಸಿದರು. ಹಾಗೆ ವಿಹರಿಸುತ್ತಿರುವಾಗಲೇ ರಾತ್ರಿ ಕಳೆಯಿತು. ಭರದ್ವಾಜರ ಕೋರಿಕೆಯಂತೆ ಬಂದಿದ್ದ ಎಲ್ಲ ನದಿಗಳೂ, ಗಂಧರ್ವರೂ, ಅಪ್ಸರೆಯರೂ, ಅವರ ಅನುಜ್ಞೆ ಪಡೆದು ತಮ್ಮ ಸ್ಥಳಗಳಿಗೆ ಹಿಂತಿರುಗಿದರು. ಆದರೆ ಇಲ್ಲಿ ಮದ್ಯಪಾನಮಾಡಿದವರು ಮತ್ತರಾಗಿಯೇ ಇದ್ದರು. ಚಂದನದ ಸುಗಂಧ ಇನ್ನೂ ಹೊಸದಾಗಿಯೇ ಇತ್ತು. ಪುಷ್ಪಮಾಲಿಕೆಗಳು ನವೀನವಾಗಿಯೇ ಇದ್ದವು. ಇವುಗಳು ಅವರಿಗೆ ತಾವು ಅನುಭವಿಸಿದ ಸೌಖ್ಯಗಳೆಲ್ಲ ಸ್ವಪ್ನರೂಪವಲ್ಲ, ವಾಸ್ತವಿಕವಾದದು ಎಂಬ ಯಥಾರ್ಥವನ್ನು ಅನುಭವಕ್ಕೆ ತರುತ್ತಿದ್ದವು.

ಈ ರೀತಿಯಲ್ಲಿ ಭರತನು ಭರದ್ವಾಜಾಶ್ರಮದಲ್ಲಿ ತನ್ನ ಪರಿವಾರದೊಡನೆ ಆತಿಥ್ಯವನ್ನು ಸ್ವೀಕರಿಸಿ ಋಷಿವರ್ಯರ ಆಜ್ಞೆಯನ್ನು ಪಡೆದು ಚಿತ್ರಕೂಟಕ್ಕೆ ಪ್ರಯಾಣ ಮಾಡಿದನು.

ಈ ವಿಧವಾದ ಆತಿಥ್ಯ ವರ್ಣನೆ ವಾಲ್ಮೀಕಿ ಮಹರ್ಷಿಗಳ ವಿಶೇಷಲೋಕಾನುಭವವನ್ನು ಪ್ರದರ್ಶಿಸುವುದಲ್ಲದೆ ಭಾರತೀಯ ನಾಗರಿಕತೆಯ ಪರಮೌದಾರ್ಯವನ್ನು ಪ್ರಕಟಿಸುತ್ತದೆ.

———

( 1 ನೆಯ ಪುಟದಿಂದ )

ಶ್ರವಣ ಮನನ ಧ್ಯಾನಗಳಲ್ಲಿ ರತರಾಗಿರುವುದೊಂದೇ ಕೆಲಸವಾಯಿತು. ತಾವು ಮಾಡಿದ ಕೃತಿಯೊಂದು ಕರ್ಮವನ್ನು ಪರಮಾತ್ಮನಿಗೆ ಸಮರ್ಪಿಸಿದರು. ತಮ್ಮ ಭೌತಿಕ ಸಂಪತ್ತಿನಲ್ಲಿರುವ ಭೂಮಿಯನ್ನು ಶ್ರೀ ವರದೇಂದ್ರ ಸ್ವಾಮಿಗಳ ಆರಾಧನ, ಮತ್ತು ನಿತ್ಯ ಪೂಜೆ ಅರ್ಚನೆಗಾಗಿ ದಾನವಾಗಿ ಕೊಟ್ಟರು. ಶ್ರೀ ವರದೇಂದ್ರಸ್ವಾಮಿಗಳ ಉತ್ಸವ ಸೇವಾಕಾರ್ಯಗಳೆಲ್ಲ, ಅದ್ಯಾಪಿ ಶ್ರೀವರದೇಂದ್ರ ಅರ್ಚಕ ಸಂತತಿಯವರು ಈಗಲೂ ನಡೆಸುತ್ತಿದ್ದಾರೆ.

ಲಿಂಗಸೂಗೂರಿನಲ್ಲಿ ಪ್ರಸಿದ್ಧವಾದ ಕಪ್ಪೀಭೀಮನ ರಥದ ನಿರ್ಮಾಣ ಕಾರ್ಯ ಇವರ ಕಾಲದಲ್ಲಿಯೇ ನೆರವೇರಿತು. ವರದೇಶದಾಸರ ಒಂದು ವಿನೂತನವಾದ ಗೃಹವು ಶ್ರೀ ವರದೇಂದ್ರರ ವೃಂದಾವನ ಸನ್ನಿಧಿಯಿಂದ ಪಶ್ಚಿಮದ ಹಿಂಭಾಗದಲ್ಲಿದೆ. ಎದುರಿಗೆ ಶ್ರೀನಿವಾಸದೇವರ ದೇವಾಲಯವಿದೆ. ಈ ಗೃಹಕ್ಕೆ ದೇಹದಲ್ಲಿರುವ ನವಛಿದ್ರ ಸದೃಶವಾದ ನವದ್ವಾರಗಳಿವೆ. ದೇಹದಲ್ಲಿನ ಇಪ್ಪತ್ನಾಲ್ಕು ತತ್ತ್ವಗಳನ್ನೇ ಸೂಚಿಸುವುವೋ ಎನ್ನುವಂತೆ ಈ ಗೃಹಕ್ಕೆ ಇಪ್ಪತ್ನಾಲ್ಕು ತೊಲೆಗಳಿವೆ. ಕರ್ಮದ ತವರು ಮನೆಯ ಈಶಾನ್ಯದಿಕ್ಕಿಗೆ ಪಾಕಶಾಲೆಯಿದೆ. ಈ ದೇಹವನ್ನು ರಚಿಸಿರುವ 'ಈರ' ನಾಯಕ ವಾಯುದೇವರನ್ನು ನೆನಪು ಮಾಡಲೋಸುಗ ಈರಪ್ಪನೆಂಬ ಬಡಿಗನೇ ಗೃಹ ನಿರ್ಮಾಣ ಮಾಡಿದ ವ್ಯಕ್ತಿಯಾಗಿದ್ದಾನೆಂಬುದರ ವರ್ಣನೆ, ಈ ಗೃಹದ ವೈಶಿಷ್ಟ್ಯವನ್ನು "ಬಾರೋ ನೂತನ ಗೃಹಕೆ ಹರಿಯೇ", ಎಂಬ ಪದ್ಯದಲ್ಲಿ ದಾಸರು ಹೃದಯಂಗಮವಾಗಿ ವರ್ಣಿಸಿದ್ದಾರೆ. ಈ ಗೃಹವನ್ನು ಸುಮಾರು ಶಾ. ಶ. ೧೮೩೮ರಲ್ಲಿ ಕಟ್ಟಿಸಿದ್ದಾರೆಂದು ತಿಳಿದು ಬರುತ್ತದೆ. ಈ ಮನೆಯನ್ನು ಕಂಡಾಗ ದಾಸರಲ್ಲಿ ಆಧ್ಯಾತ್ಮಿಕದ ಆಸಕ್ತಿ – ಅದರ ಆಳ ಎಷ್ಟಿತ್ತೆಂಬುದು ಅರಿವಾಗುತ್ತದೆ.

ದಾಸರ ಕೀರ್ತನೆಗಳಲ್ಲಿ ವಿಶೇಷವಾಗಿ ಹರಿಭಕ್ತಿ ತತ್ತ್ವಜ್ಞಾನ, ಶಾಸ್ತ್ರಗಳ ವಿಚಾರ, ಆಧ್ಯಾತ್ಮಿಕ ಮೌಲ್ಯಗಳು ಎದ್ದು ಕಾಣುತ್ತವೆ. ದಾಸರಿಗೆ ಕನ್ನಡ ಸಂಸ್ಕೃತ ಭಾಷೆಯ ಜೊತೆಗೆ, ಉರ್ದು, ಫಾರ್ಸಿ, ಮರಾಠಿ ಭಾಷೆಗಳಲ್ಲಿಯೂ ಪ್ರಭುತ್ವವಿತ್ತೆಂದು ತಿಳಿದು ಬರುತ್ತದೆ. ಫಾರ್ಸಿ ಭಾಷೆಯಲ್ಲಿಯೂ ಕವಿತೆಯನ್ನು ಬರೆದಿದ್ದಾರೆ. ಸ್ವಪ್ನವೃಂದಾವನಾಖ್ಯಾನ, ಶ್ರೀ ಪ್ರಹ್ಲಾದ ಚರಿತ್ರೆ, ಇವೇ ಮುಂತಾದವು ಇವರು ರಚಿಸಿದ ಕೃತಿ ರತ್ನಗಳು. ದಾಸರು ತಮ್ಮ ಜನ್ಮಾಂತರದ ಸವಿನೆನಪಿಗಾಗಿಯೋ ಏನೋ ಶ್ರೀ ರಾಮ ಚರಿತ್ರೆಯನ್ನೇ ಹೆಚ್ಚಾಗಿ ತಮ್ಮ ಕಾವ್ಯ ರೂಪದಲ್ಲಿ ರಚಿಸಿ ಮರ್ಯಾದಾಪುರುಷನಾದ ಶ್ರೀರಾಮನ ಗುಣ ಗಾನವನ್ನು ಬಹು ಭಕ್ತಿಯಿಂದ ಮಾಡಿದ್ದಾರೆ.

"ನಿನ್ನ ಕರುಣದಿ ಹನುಮ ಬ್ರಹ್ಮತ್ವವೈದಿದನು। ನಿನ್ನ ನಾಮದಿ ವ್ಯಾಧ ವಾಲ್ಮೀಕನಾದ। ನಿನ್ನ ಪದರಜ ಸೋಂಕಿ ಶಿಲೆಯಬಲೆಯಾದುದು। ನಿನ್ನ ಪ್ರೇರಣೆಯಿಂದ ತೃಣವೇ ಜ್ವಾಲಾಯಿತು। ಶ್ರೀರಾಮ ಜಯರಾಮ ಜಯ ಜಯತು ರಾಮ।" ಎಂಬುದಾಗಿ ೪೭ ನುಡಿಗಳಿಂದ ಶ್ರೀರಾಮಚಂದ್ರನ ಅನಂತ ಮಹಿಮೆಗಳನ್ನು ಕೊಂಡಾಡಿದ್ದಾರೆ.

ಪರಮಾತ್ಮನ ಕ್ರಿಯೆಗಳೆಲ್ಲವೂ ದ್ವಂದ್ವವಾಗಿರುತ್ತವೆಂಬುದಕ್ಕೆ ಶ್ರೀ ರಾಮಕೃಷ್ಣಾವತಾರವೆರಡರಲ್ಲಿಯೂ ಶ್ರೀಹರಿಯ ಒಂದೇ ತೆರನಾದ ಪರಾಕ್ರಮವನ್ನು ಸಮನ್ವಯಗೊಳಿಸಿ ದಾಸರು ಬಹು ಸ್ವಾರಸ್ಯವಾಗಿ ಹೀಗೆ ವರ್ಣಿಸುತ್ತಾರೆ–

"ಶಿಲೆಯ ಪಾದರಜದಲಿ ಸ್ತ್ರೀ ಮಾಡಿದ ಸುಲಲಿತಗುಣನಿಧಿ ರಾಮಹರೇ। ಬಲು ವಕ್ರಾಗಿದ್ದಬಲೆಯ ಕ್ಷಣದಲಿ ಚೆಲುವೆಯ ಮಾಡಿದ ಕೃಷ್ಣಹರೇ॥" ಎಂದು ವೃಂದಗಾನದಲ್ಲಿ ಭಕ್ತವೃಂದವೆಲ್ಲ ತನ್ಮಯತೆಯಿಂದ ಹೇಳುವಾಗ ಶ್ರೀಹರಿಯ ಎರಡು ಅವತಾರಗಳ ಒಂದೇ ತೆರನಾದ ದ್ವಂದ್ವಕ್ರಿಯೆ ಅರಿವಾಗಿ ಭಕ್ತ್ಯುದ್ರೇಕವಾಗುತ್ತದೆ.

ಸಮಾಜದ ಅಂಕುಡೊಂಕುಗಳನ್ನು ತಿದ್ದಲು ಪ್ರಯತ್ನಿಸಿದ ದಾಸರು–

"ಪರರ ನಿನ್ನಂತೆ ಬಗೆಯಲೋ ಮನವೆ। ಪರರ ನಿನ್ನಂತೆ ಬಗೆಯದಿದ್ದರೆ ಯಮನು ಕೊರೆದು ಕೊಲ್ಲಿ ನಿನ್ನ ನಿರದುದೊಳಿರಿಸುವ।" ಎಂಬುದಾಗಿ ಸ್ವಾರ್ಥಿಗಳನ್ನು ಎಚ್ಚರಿಸಿದ್ದಾರೆ.

ದಾಸರು ತಮ್ಮ ಕಚೇರಿ ಕಾರ್ಯಗಳಿಗಾಗಿ ರಾಯಚೂರಿಗೆ ಆಗಮಿಸಿದಾಗ ಅತ್ತ ಲಿಂಗಸೂಗೂರಿನಲ್ಲಿ ಪ್ರಾಣೇಶದಾಸರ ಪ್ರಪೌತ್ರರು ತಮಗೆ ಸೋದರಮಾವಂದಿರಾದ ರಾಮಣ್ಣನವರ ಜ್ಯೇಷ್ಠಪುತ್ರ ಹನುಮಂತರಾಯರಿಗೆ (ಅಭಿನವ ಪ್ರಾಣೇಶವಿಠಲರಿಗೆ) ವಿಪರೀತ ಕಾಯಿಲೆವುಂಟಾದ ವಾರ್ತೆಕೇಳಿದ ಕೂಡಲೇ ಕರುಣಾಮಯರಾದ ದಾಸರು ಶ್ರೀಧನ್ವಂತ್ರಿನಾಮಕ ಪರಮಾತ್ಮನನ್ನು ಕುರಿತು– "ನಿನ್ನನೇ ನಂಬಿರುವೆ ನಿನ್ನನೇ ಪ್ರಾರ್ಥಿಸುವೆ। ಧನ್ವಂತ್ರಿ ನೀನೆನ್ನ ಮೊರೆಯಾಲಿಸೊ। ನಿನ್ನ ಸೇವಕರ ಬಲು ಬನ್ನಬಡಿಸಲು ಸಲ್ಲ। ಇನ್ನು ನೀ ಕರುಣಿಪುದು ವರದೇಶವಿಠಲ" ಎಂದು ಬಹು ಆರ್ತರಾಗಿ ಸ್ತೋತ್ರ ರಚಿಸಿ ಕಾಯಿಲೆಯನ್ನು ಗುಣಪಡಿಸಿದರು.

ಭಗವದನುಗ್ರಹಕ್ಕೆ ಪಾತ್ರರಾದ ಶ್ರೀ ವರದೇಶದಾಸರು ನಿಂತಲ್ಲಿ ಕುಳಿತಲ್ಲಿ ತಮ್ಮ ಪ್ರಾಸಾದಿಕ ವಾಣಿಯಿಂದ ದಾಸಸಾಹಿತ್ಯದ ಹೊನಲನ್ನೇ ಹರಿಸಿದ್ದಾರೆ. ಇವರ ಪದಗಳು ಮಂತ್ರಸಮಾನ. ಮಂತ್ರಗಮ್ಯನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ಇವರ ಪದಪದ್ಯಗಳೇ ಮುಖ್ಯ ಸಾಧನ. ತಾರತಮ್ಯೋಕ್ತವಾದ ನೂರಾರು ಪದ ಪದ್ಯಗಳನ್ನು, ಉಗಾಭೋಗಗಳನ್ನು ರಚಿಸಿ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇವರ ಸಾಹಿತ್ಯದ ಸೊಬಗು, ಭಾಷಾ ಪ್ರೌಢಿಮೆ, ಭಾವ ಬಂಧುರ ಅಸದೃಶವಾದದ್ದು. ಲಕ್ಷ್ಮೀದೇವಿಯರನ್ನು ಕುರಿತು ದಾಸರು ಸ್ತೋತ್ರಗೈಯುವಾಗ– "ದುರ್ಜನಸಂಗ ವಿವರ್ಜಿಸಿ ನಿರುತದಿ। ಸಜ್ಜನಸಂಗ ಸುಖ ಬಯಸಿ। ಅರ್ಜುನ ಸಖನ ಪದಾಬ್ಜ ಧ್ಯಾನಗಳು। ಗರ್ಜಿಸುತಲಿ ನಿರ್ಲಜ್ಜನೆನಿಪ। ಸೌಭಾಗ್ಯವೇ ಪಾಲಿಸೆನಗೆ। ಶ್ರೀ ಭಾರ್ಗವಿ ಜನನಿ" ಎಂದು ಮನವಾರೆ ಕೊಂಡಾಡುತ್ತಾರೆ.

ಪರಮಾತ್ಮನೇ ಆಪದ್ಬಾಂಧವನಾಗಿ ಅವನೇ ರಕ್ಷಕನಾಗಿ ನಮ್ಮನ್ನು ಸದಾ ಕಾಯಬೇಕೆಂದು ಪ್ರಾರ್ಥಿಸುವ ದಾಸರು– ಮುಂದೆ ಹೌದೆಂದೆನ್ನ ಹಿಂದೆ ಜನ ನಿಂದಿಸಲಿ। ಇಂದಿರೇಶನೆ ನಿನ್ನ ಕರುಣೆ ಮಾತ್ರಿರಲಿ। ಮಂದಜಾಸನ ಜನಕ ಇಂದಿರಾಪತಿ ಯಾಪ। ದ್ವಂಧು ನೀನೆಂದು ಮನವರಿಕೆ ಇರಲಿ।", "ಏಸೇಸು ಕಲ್ಪಕ್ಕೂ ಈಶನು ನೀನಯ್ಯ। ಆಸಾಸು ಕಲ್ಪಕ್ಕು ದಾಸನು ಇವನಯ್ಯ ಉದಾಸೀನ ಮಾಡದೆ ಪೋಷಿಸಬೇಕಯ್ಯ" ಎಂದು ಶ್ರೀ ಹರಿಯಲ್ಲಿ ಮೊರೆಹೋದ ಪದಪಂಕ್ತಿಗಳು ಮುಮುಕ್ಷು ಜೀವರುಗಳಿಗೆ ಮೆಲುಕು ಹಾಕುವಂತಿವೆ.

ಕೋಸಿಗಿಯ ಗುರು ಜಗನ್ನಾಥ ದಾಸರು ತಮ್ಮ ಶಿಷ್ಯ–ಪರಿವಾರಸಮೇತ ಲಿಂಗಸೂಗೂರಿಗೆ ಆಗಮಿಸಿ ತಮ್ಮ ಪ್ರಿಯಶಿಷ್ಯರಾದ– ವರದೇಶ ದಾಸರಲ್ಲಿಯೇ ತಂಗಿದ್ದರು. ಶ್ರೀಗುರು ರಾಘವೇಂದ್ರ ಸ್ತೋತ್ರದ ಕರ್ತೃಗಳಾದ ಅಪ್ಪಣ್ಣಾಚಾರ್ಯರ ಮೂರು ಅವತಾರಗಳ ಗಹನವಾದ ಚರಿತ್ರೆಯನ್ನು ತಮ್ಮ ಗುರುಮುಖದಿಂದ ಗ್ರಹಿಸಿದ ವರದೇಶದಾಸರು ಹಿಂದಿನ ಜನ್ಮದ ಅಪ್ಪಣ್ಣಾಚಾರ್ಯರೇ ತಮ್ಮ ಗುರುಗಳಾಗಿ ಅವತರಿಸಿದ್ದಾರೆಂದು ದೃಢವಾಗಿ ನಂಬಿ– "ಸ್ಮರಿಸಿ ಬದುಕಿರೋ ಗುರುರಾಯರ ಪಾದವ। ಕೊಡುವನು ಸಂಪದವ। ಶಿರಿರಘುವರನ ಕರುಣದಿ ಧರೆಯೊಳ್ಮೆರೆವಾ। ಎಲ್ಲಿರುವಿಗೆಲ್ಲಿರುವಾ"– ಎಂಬ ಮೂರು ನುಡಿಗಳ ಪದ ಮಾಡಿ ಗುರುಗಳ ಸನ್ನಿಧಿಯಲ್ಲಿ ಸಮರ್ಪಿಸಿದರು. ಸ್ವರೂಪ ಜ್ಞಾನವಾದ ಮೇಲೆ ದೇವತೆಗಳು ಸಾಧನ ಶರೀರದಲ್ಲಿ ಒಂದು ಕ್ಷಣವಾದರೂ ನಿಲ್ಲುವುದಿಲ್ಲವಾದ್ದರಿಂದ– "ನಮ್ಮೀರ್ವರ ಅವತಾರ ಕಾರ್ಯ ಮುಗಿಯಿತು. ಈ ಗುಟ್ಟನ್ನು ರಟ್ಟು

ಪಡಿಸಬೇಡ" ಎಂದು ತಮ್ಮ ಶಿಷ್ಯರಿಗೆ ಗುಟ್ಟಾಗಿ ಹೇಳಿದ ಗುರುಜಗನ್ನಾಥದಾಸರು ಕೋಸಿಗಿಗೆ ಪ್ರಯಾಣ ಬೆಳೆಸಿದರು. ಹಸುವಿದ್ದಲ್ಲಿ ಕರುವು ಧಾವಿಸುವಂತೆ ಗುರುವಿದ್ದಲ್ಲಿಗೇ ಶಿಷ್ಯರೂ ಧಾವಿಸಿ ಕೊಂಡು ಹೋದರು.

ಕೊನೆಯ ಗಳಿಗೆಯಲ್ಲಿ ಗುರುಶಿಷ್ಯರು ಆನಂದ ಪರವಶರಾಗಿ ಪರಮಾತ್ಮನ ನಾಮ ಸಂಕೀರ್ತನೆ ಯಲ್ಲಿ ನಿರತರಾದರೂ ಮೊದಲು ಗುರುಗಳಿಗೆ ವಿಪರೀತ ಕಾಯಿಲೆವುಂಟಾಯಿತು. ಕ್ಷೀಣವಾಗ ತೊಡಗಿದರು. ಅಷ್ಟರಲ್ಲಿಯೇ ಶಿಷ್ಯರು ಮೊದಲು ತಾವು ಮುಂದೆ ಹೋಗಿ ಗುರುಗಳ ಉಪಚಾರಕ್ಕೆ ಕಾಯ್ದಿರಬೇಕೆಂಬ ಮನಸ್ಸು ಬಲವಾದ ಮೇಲೆ ಲಯ ಚಿಂತನೆ ಮಾಡುತ್ತ ಶಾಲಿವಾಹನ ಶಕೆ ೧೮೪೦ ಕಾಳಯುಕ್ತಿನಾಮ ಸಂವತ್ಸರದ ಆಶ್ವಯುಜ ಶುದ್ಧ ತೃತೀಯಾ ದಿನದಂದು ತಮ್ಮ ಗುರುಗಳ ಸಮ್ಮುಖದಲ್ಲಿಯೇ ಹರಿಪುರವನ್ನು ಸೇರಿದರು.

ಕೋಸಿಗಿಯ ದಾಸರು ತಮಗೆ ಬಂದಿರುವ ಮೃತ್ಯುವನ್ನು ಎದುರಿಸಿ ತಮ್ಮ ಶಿಷ್ಯನಿಗಾಗಿ ಬದುಕಿ ಅಂತ್ಯಕ್ರಿಯೆಗಳನ್ನು ತಾವೇ ಸ್ವತಃ ನೆರವೇರಿಸಿದರೆಂದು ತಿಳಿದುಬರುತ್ತದೆ. ಗುರು ಶಿಷ್ಯರು ತಾವು ಮೊದಲೇ ಮಾತನಾಡಿಕೊಂಡಂತೆ ಶಿಷ್ಯ ಹೋದಮೇಲೆ ತಡಮಾಡದೇ ಅದೇ ಅಶ್ವಯುಜಬಹುಳ ಪ್ರತಿಪದೆಯಂದು ಗುರು ಜಗನ್ನಾಥ ದಾಸರೂ, ವೈಕುಂಠಯಾತ್ರೆ ಮಾಡಿದರೆಂದ ಮೇಲೆ ದೇವತೆಗಳ ವಿಚಾರ, ಅವರ ಮಹಿಮೆ ಸಾಮಾನ್ಯ ಜನರಿಗೆ ತಿಳಿಯಲಸಾಧ್ಯ.

"ಪ್ರಭುರಾಯ ಪ್ರಭುರಾಯಾ ಅಭಿವಂದಿಸುವೆನು ಶುಭಮತಿ ಪಾಲಿಸು" ಎಂದು ವರದೇಶದಾಸಾರ್ಯರನ್ನು ಕುರಿತು ಬಲ್ಲಗಿಯ ವರಕವಿಗಳು ಗುಂಡಾಚಾರ್ಯರಂತೆ ಸ್ತೋತ್ರಗೈದು, ಅವರ ಪುಣ್ಯದಿನದ ಶುಭಗಳಿಗೆಯಲ್ಲಿ ನಮ್ಮೆಲ್ಲರಿಗೂ ಶುಭಮತಿ ಪಾಲಿಸೆಂದು ಶ್ರೀವರದೇಶ ವಿಠಲನಲ್ಲಿ ಪ್ರಾರ್ಥಿಸಿ ಧನ್ಯರಾಗೋಣ ! *

### ಗುರುತಿಸಿ - ಬರೆಯಿರಿ ಶೀರ್ಷಿಕೆಯಲ್ಲಿ·

# ಸ್ವಾಮಿ ವಿವೇಕಾನಂದ

ಯುಗ ಯುಗಾಂತರದಲ್ಲೊಮ್ಮೆ ಬೇರೊಂದು ಬೆಳಕಿನ ನಾಡಿನಿಂದ ಜೀವ ಜ್ಯೋತಿ ಯೊಂದು ಈ ಭೂತಳಕ್ಕೆ ಇಳಿದು ಬರುತ್ತದೆ. ಆ ದೂರದ ನಾಡಿನ ಸಿರಿಯನ್ನು ಬಲವನ್ನು ಮತ್ತು ಬೆಳಕನ್ನು ಕಂಗಾಲಾದ ಈ ನಾಡಿಗೆ ತರುತ್ತದೆ. ಇಂಥ ಜ್ಯೋತಿ ಹುಟ್ಟಿದ ಭಾರತ ಧನ್ಯ ! ಇಂಥ ಒಂದು ಬೆಳಕೇ ದೀನ ದಲಿತರಿಗಾಗಿ ದುಃಖಿಸಿದ ಕರುಣಾಮಯೀ, ರಾಜಯೋಗಿ, ತಪಸ್ವೀ ಸ್ವಾಮಿವಿವೇಕಾನಂದರು.

ಒಂದು ದೊಡ್ಡ ಕ್ಷತ್ರಿಯ ಮನೆತನದಲ್ಲಿ ಹುಟ್ಟಿದನು ನರೇನ್, ಮಗು ಮತ್ತು ಬಾಲಕನಾಗಿ ಕಳೆದ ಬಾಳು ಕಲೆಗಾರನಾಗಿ ಚೆಲುವನಾದ ಅರಸು ಮಗನಿಗೆ ಸವಾಲೆಸೆಯುವಂಥದಿತ್ತು. ಬುದ್ಧಿಯ ವೈಭವ ಮತ್ತು ವಿವಿಧತೆ ಅವನಿಗೆ ದೈವದ ಕಾಣಿಕೆ. ಚಿಕ್ಕಂದಿನಿಂದಲೂ ಅವನಿಗೆ ಧ್ಯಾನದಲ್ಲಿ ಆಸಕ್ತಿ. ದಾರ್ಶನಿಕ ಚರ್ಚೆಗಳಲ್ಲಿ ಅವನಿಗೆ ಪ್ರೀತಿ. ಈ ವಾದ, ವಿವಾದ, ವಿಮರ್ಶೆ, ತರ್ಕ ಇವೇ ಮುಂದೆ ಅವನಿಗೆ ವಿವೇಕಾನಂದ ಎಂಬ ಹೆಸರನ್ನು ತಂದವು. ಅವನ ಧರ್ಮನಿರ್ಭರತೆ, ಚಿತ್ತ ನಿರ್ಮಲತೆ ಬಾಳಿನ ಸಿರಿಸೊಗಸು ದೈವದತ್ತವಾಗಿ ಬಂದಿದ್ದರೂ, ಈ ಚೆಲುವ ತರುಣ ತನ್ನನ್ನು ಕಡುತರ ವೈರಾಗ್ಯದ ಕಟ್ಟಿನಲ್ಲಿ ಬಿಗಿದು ಕೊಂಡನು. ದೇವನ ಸಾಕ್ಷಾತ್ಕಾರದ ಹಂಬಲ ಅವನನ್ನು ರಾಮಕೃಷ್ಣ ಪರಮಹಂಸರ ಶಿಷ್ಯನನ್ನಾಗಿ ಮಾಡಿತು. ರಾಮಕೃಷ್ಣರು ಹೊರಗೆ ಭಕ್ತರು ಒಳಗೆ ಜ್ಞಾನಿಗಳು. ವಿವೇಕಾನಂದರು ತಿರುವು ಮುರುವು ಭಾಗೀರಥಿಯಂತೆ. ವಿಶಾಲ ಪ್ರವಾಹದ ಮೇಲೆ ಪಶುಪಕ್ಷಿ ದನಕರು ಮಾನವರನ್ನು ಎತ್ತಿ ಹಿಡಿದು ತೇಲಿಸುತ್ತ ಗಂಭೀರವಾಗಿ ಸಾಗುತ್ತಿರುವ ಹೆಮ್ಮರದ ಹಿರಿದಾದ ಬಾಳು, ನರೇಂದ್ರನ ಬಾಳು. ಭಗವಾನ್ ಶ್ರೀ ರಾಮಕೃಷ್ಣರ ಆದೇಶದಂತೆ ಆಧ್ಯಾತ್ಮಿಕ ಕಾರ್ಯದಲ್ಲಿ ದೇಶ ವಿದೇಶಗಳಲ್ಲಿ ಧರ್ಮಪ್ರಸಾರ ಸಾಗಿಸುವುದರ ಹೊಣೆ ವಿವೇಕಾನಂದರ ಪಾಲಿಗೆ ಬಂದಿತು.

ಚಿಕಾಗೋ ಪಟ್ಟಣದಲ್ಲಿ ೧೮೯೩ ಸೆಪ್ಟಂಬರ್ ದಲ್ಲಿ ಸರ್ವಧರ್ಮ ಸಮ್ಮೇಳನದಲ್ಲಿ ಕೇವಲ 30 ವರ್ಷವಯಸ್ಸಿನ ಈ ಅಜ್ಞಾತ ತರುಣನ ತೇಜೋಮಯ ವ್ಯಕ್ತಿತ್ವದಲ್ಲಿ ಮಿಕ್ಕ ಧರ್ಮಪ್ರತಿನಿಧಿಗಳೆಲ್ಲರೂ ಸಪ್ಪೆಯಾದರು. ಉಳಿದ ಎಲ್ಲಾ ಉಪನ್ಯಾಸಕಾರರು ಪ್ರತಿಯೊಬ್ಬರೂ ತಮ್ಮ ಪಂಥದ ದೇವರನ್ನು ಕುರಿತು ಮಾತನಾಡಿದರು. ಆದರೆ ವಿವೇಕಾನಂದರು ಮಾತ್ರ ಅವರೆಲ್ಲರ ದೇವರನ್ನು ಕುರಿತು ಮಾತನಾಡಿದರು. ವಿಶ್ವರೂಪ ಪರಮಾತ್ಮನಲ್ಲಿ ಎಲ್ಲರ ಎಲ್ಲ ದೇವರನ್ನು ಕಂಡರು. ವಿವೇಕಾನಂದರ ಮನಸ್ಸು ದೀನ ದಲಿತರ ವಿಷಯದಲ್ಲಿ ಹೂವಿನಷ್ಟು ಮೃದುವಾಗಿರುತ್ತಿತ್ತು. ವಿವೇಕಾನಂದರು, ಜ್ಞಾನಿ, ಪಂಡಿತರು, ಈಶಪ್ರೇಮಿ ಮೇಲಾಗಿ ಮಾನವ ಪ್ರೇಮಿಯಾಗಿ ಬಾಳಿದರು. ದೀನ ದರಿದ್ರರಲ್ಲಿ ನಾರಾಯಣನನ್ನು ಕಂಡರು. ಹಿಂದೂ ಜನತೆಯ ಧಾರ್ಮಿಕ ಜೀವನದ ಅಧೋಗತಿಯನ್ನು ಕಂಡು ಸಿಡಿದೆದ್ದರು. ಇವರು ತಮ್ಮ ಕಾರ್ಯ ನಡೆಸುತ್ತಲೇ 1902 ಜುಲೈ 4ನೇ ತಾರೀಖಿನಂದು ಪರಂಧಾಮವನ್ನೈದಿದರು.

ಕುಮಾರಿ ಜಾಹ್ನವಿ ಜೋಶಿ
ಪ್ರಥಮ ಬಿ.ಎ.

## ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

ತಿ. ತಿ. ದೇ.

# ಕರ್ನಾಟಕದ ವಾಸ್ತುಶಿಲ್ಪ



ಆದಿಮಾನವನ ಮೇಲೆ ಮಾನವತ್ವದ ಪ್ರಭಾವ ಹೆಚ್ಚಾದಂತೆ ತನ್ನ ಅವಶ್ಯಕತೆಗಳನ್ನು ಸಂಜ್ಞೆಯಿಂದ ತಿಳಿಸುವುದನ್ನು ಬಿಟ್ಟು ನಾದವನ್ನು ಮಾಧ್ಯಮವನ್ನಾಗಿ ಬಳಸಿಕೊಂಡು ಬೆಳೆಸಿಕೊಂಡು ನಾಗರಿಕತೆಯ ಬಾಲ ಹೆಜ್ಜೆಗಳನ್ನು ಇಡುತ್ತಿದ್ದಾಗ, ಪ್ರಕೃತಿಯ ಅದೃಶ್ಯ ಶಕ್ತಿಗಳನ್ನು ಕಂಡಾಗ ಆತನಿಗೆ ಆಶ್ಚರ್ಯ, ಸಂತೋಷ, ಭಯ, ದಿಗ್ಭ್ರಮೆಗಳು ಉಂಟಾಗಿ ಅದೇ ಧರ್ಮಕ್ಕೆ ತಳಹದಿಯಾಗಿ ತನ್ನ ಗುಹೆಗಳಲ್ಲಿ ಪ್ರಕೃತಿಯ ಅಗೋಚರ ಶಕ್ತಿಗಳಿಗೆಲ್ಲ ಒಂದೊಂದು ರೂಪ ಕೊಟ್ಟು ಚಿತ್ರಿಸತೊಡಗಿದ. ಅವುಗಳ ಮತ್ತು ತನ್ನ ಮಾನಸಿಕ ತೃಪ್ತಿಗಾಗಿ ಆವೇಶಗೊಂಡು ಹಾಡಿ, ಕುಣಿದು ತೃಪ್ತಿಪಟ್ಟುಕೊಂಡ–ಹೀಗೆ ಚಿತ್ರ, ಶಿಲ್ಪ, ನೃತ್ಯ, ಸಂಗೀತ ಕಲೆಗಳಿಗೆಲ್ಲ ಧರ್ಮವೇ ಮೂಲವಾಗಿ ಲಲಿತಕಲೆಗಳ ಉಗಮವಾಯಿತೆನ್ನಬಹುದು.

ಭಾರತೀಯ ವಾಸ್ತು ಶಿಲ್ಪಕ್ಕೆ, ಎಲ್ಲ ಕಲೆಗಳಿಗೂ ಹೇಳುವಂತೆ, ದೈವಿಕ ಮೂಲವನ್ನೇ ಶಾಸ್ತ್ರ ಗ್ರಂಥಗಳು ಹೇಳುತ್ತವೆ. ವಾಸ್ತು ಶಿಲ್ಪಕ್ಕೆ ಮೂಲಾಧಾರ ಗ್ರಂಥಗಳೆಂದರೆ ಮಾನಸಾರ. ಮನುಷ್ಯಾಲಯ ಚಂದ್ರಿಕಾ, ಅಂಶು ಬೋಧಿನಿ, ಕೌಟಿಲ್ಯನ ಅರ್ಥಶಾಸ್ತ್ರ. ಸುಪ್ರಭೇದಾಗಮ, ವಾಸ್ತು ವಿದ್ಯಾ ಬೃಹತ್ಸಂಹಿತಾ, ಶಿಲ್ಪರತ್ನ, ಅಭಿಲಷಿತಾರ್ಥ ಚಿಂತಾಮಣಿ, ಮಯಮತ ಶಿಲ್ಪ ಶಾಸ್ತ್ರ, ಕಾಶ್ಯಪಶಿಲ್ಪ. ಅಂಶುಮದ್ಭೇದಾಗಮ ಮತ್ಸ್ಯಪುರಾಣದಲ್ಲಿಯೂ ವಾಸ್ತು ಶಿಲ್ಪದ ನಿರೂಪಣೆ ಇದೆ. "ಮಾನಸಾರ" ನಿರ್ದೇಶಿಸಿರುವಂತೆ – ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತ್ವಷ್ಟೃ ಮತ್ತು ಮನು ಹುಟ್ಟಿದರು. ಇವರ ನಾಲ್ಕು ಮಂದಿ ಮಕ್ಕಳು ಕ್ರಮವಾಗಿ ಸ್ಥಪತಿ, ಸೂತ್ರಗ್ರಾಹಿ, ವರ್ಧಕಿ ಮತ್ತು ತಕ್ಷಕ ಎಂಬುವರು. ಇವರಿಂದ ವಾಸ್ತುಕಲೆ ಬೆಳೆಯಿತೆನ್ನುತ್ತಾರೆ. ಇಡೀ ಭಾರತದ ವಾಸ್ತುಶಿಲ್ಪವನ್ನು ವಿವರಿಸಲು ಅನೇಕ ಬೃಹತ್ ಗ್ರಂಥಗಳು ಬೇಕಾಗಬಹುದು. ಭಾರತೀಯ ವಾಸ್ತುಶಿಲ್ಪಕ್ಕೆ ಕರ್ನಾಟಕದ ಕೊಡುಗೆ ಅಪಾರ. ಅಷ್ಟೇ ಏಕೆ ಎಲ್ಲ ಲಲಿತ ಕಲೆಗಳಿಗೂ ಕರ್ನಾಟಕ ಅಮೋಘ ಸೇವೆ ಸಲ್ಲಿಸಿದೆ. ಈ ಲೇಖನದಲ್ಲಿ ಕರ್ನಾಟಕದ ವಾಸ್ತುಶಿಲ್ಪ ಸಾಗರದ ಒಂದು ಹನಿಯಷ್ಟು ಮಾತ್ರದ ಸೂಕ್ಷ್ಮ ಪರಿಚಯ ಮಾಡಿಕೊಡಲು ಪ್ರಯತ್ನಿಸಲಾಗಿದೆ.

ಕರ್ನಾಟಕದ ವಾಸ್ತು ಶಿಲ್ಪವನ್ನು ಪ್ರಧಾನವಾಗಿ ನಾಲ್ಕು ಘಟಕಗಳಾಗಿ ವಿಭಾಗಿಸಬಹುದು.

೧. ಚಾಲುಕ್ಯ ಪೂರ್ವಯುಗ ( ಕ್ರಿ ಶ ಸುಮಾರು ೫ ನೇ ಶತಮಾನದವರೆಗೆ )

೨. ಚಾಲುಕ್ಯ ಯುಗ ( ೬ ರಿಂದ ೧೦ ನೆಯ ಶತಮಾನ ಪೂರ್ತಿ, ರಾಷ್ಟ್ರಕೂಟ ಯುಗವೂ ಸೇರಿ. )

೩. ಹೊಯ್ಸಳಯುಗ ( ೧೧ ನೆ ಶತಮಾನದಿಂದ ೧೩ ನೆ ಶತಮಾನದ ಕೊನೆ )

೪. ವಿಜಯನಗರದ ಕಾಲ ( ೧೪ ರಿಂದ ಈಚಿನದು )

ಕರ್ನಾಟಕದಲ್ಲಿ ಚಾಲುಕ್ಯರ ಆಳ್ವಿಕೆಗಿಂತ ಹಿಂದಿನ ವಾಸ್ತು ಶಿಲ್ಪಶೈಲಿಯನ್ನು ಜಿ. ಎಂ. ಮೊರ್ಯಾಸ್‌ರವರು ತಮ್ಮ "ಕದಂಬ ಕುಲ" ಎಂಬ ಗ್ರಂಥದಲ್ಲಿ "ಕದಂಬ ಶೈಲಿ" ಎಂದಿದ್ದಾರೆ. ಆದರೆ ಫರ್ಗ್ಯೂಸನ್‌ರವರು ಚಾಲುಕ್ಯ ಶೈಲಿಗಿಂತ ಪ್ರಾಚೀನವಾದ ಒಂದು ಶೈಲಿ ಕರ್ನಾಟಕದಲ್ಲಿ ತ್ತೆಂಬ ಅಭಿಪ್ರಾಯ ಪಟ್ಟರೆ ಅನಂತರ ಬಂದ ಬಂದ 'ಕಸಿನ್ಸ್' ರವರು ತಮ್ಮ "Chalukya Architecture" ಎಂಬ ಗ್ರಂಥದಲ್ಲಿ ಫರ್ಗ್ಯೂಸನ್‌ರವರ ಅಭಿಪ್ರಾಯವನ್ನು ಸಾಧಾರವಾಗಿ ಸಮರ್ಥಿಸಿದ್ದಾರೆ.

ಶಾಸ್ತ್ರ ಗ್ರಂಥಗಳು ಹೇಳಿರುವಂತೆ ಚಾಲುಕ್ಯ ವಾಸ್ತು ಶೈಲಿಯು "ವೇಸರ" ಶೈಲಿಯನ್ನು ಅನುಸರಿಸಿದೆ. ಈ ವೇಸರ ಶೈಲಿಯು ಔತ್ತರೇಯ (ನಾಗರ) ದಾಕ್ಷಿಣಾತ್ಯ (ದ್ರಾವಿಡ) ಶೈಲಿಗಳ ಸಮ್ಮಿಲನದಿಂದುಂಟಾಗಿರುತ್ತದೆ. ಚಾಲುಕ್ಯ ವಾಸ್ತು ಶೈಲಿಯನ್ನು ಕಸಿನ್ಸ್‌ರವರು ಎರಡು ಹಂತಗಳಾಗಿ ವಿಂಗಡಿಸಿದ್ದಾರೆ. ಮೊದಲನೆಯದು ಇಮ್ಮಡಿ ಪುಲಿಕೇಶಿಯ ಕಾಲದಿಂದ ೮ ನೆಯ ಶತಮಾನದಲ್ಲಿ ಬಾದಾಮಿ ಚಾಲುಕ್ಯರು ರಾಷ್ಟ್ರಕೂಟರಿಂದ ಪರಾಜಿತರಾದ ಕಾಲದವರೆಗೆ. ಎರಡನೆಯದು ೧೦ ನೆಯ ಶತಮಾನದಲ್ಲಿ ಚಾಲುಕ್ಯರು ರಾಷ್ಟ್ರಕೂಟರನ್ನು ಜಯಿಸಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿಕೊಂಡ ಕಾಲದವರೆಗೆ.

ಉತ್ತರ ಭಾರತದಲ್ಲಿ ಗುಪ್ತರ ಕಾಲದ ಸುವರ್ಣಯುಗ ಅವರ ವಾಸ್ತು ಶಿಲ್ಪಕ್ಕೂ ಸುವರ್ಣಯುಗವಾಗಿದ್ದಂತೆ ಕನ್ನಡ ನಾಡಿನಲ್ಲೂ ವಾಸ್ತು



ಬೇಲೂರಿನ ಶ್ರೀ ಚೆನ್ನಕೇಶವ ದೇವಾಲಯದ ದ್ವಾರ ಗೋಪುರ. ಚಿತ್ರ : ಕೆ. ಜಿ,

ಶಿಲ್ಪದ ಸುವರ್ಣಯುಗವಾಗಿದ್ದಿತು. ಬಾದಾಮಿ ಚಾಲುಕ್ಯರ ಕಾಲದ ವಾಸ್ತು ಶಿಲ್ಪ ಕಲಾ ಚಾತುರ್ಯವನ್ನು ಜಗತ್ತಿಗೆ ಸಾರಲು ಬಾದಾಮಿಯ ಪರಮ ಸುಂದರ ಶಿಲಾದೇವಾಲಯಗಳಿವೆ. ನಗರದ ಆಗ್ನೇಯಕ್ಕೆ ಅಭ್ರಂಕಷ ಪರ್ವತಗಳ ತಪ್ಪಲಲ್ಲಿ ಚಿಕ್ಕದೊಂದು ಸರೋವರದ ತಟದಲ್ಲಿ ಮೊದಲನೆಯ ಪುಲಿಕೇಶಿಯ ಮಕ್ಕಳಾದ ಕೀರ್ತಿವರ್ಮ ಮತ್ತು ಮಂಗಳೇಶರು ಕಟ್ಟಿಸಿದ ಶಿಲಾ ದೇವಾಲಯಗಳಿವೆ. ಇವುಗಳಲ್ಲಿ ಒಂದು ಜಿನಾಲಯ, ಉಳಿದ ಮೂರು ವಿಷ್ಣು ಶಿವ ದೇವಾಲಯಗಳು.

ಚಾಲುಕ್ಯರ ಕಾಲದ ವಾಸ್ತು ಶೈಲಿಯ ಅತಿ ಪ್ರಾಚೀನ ದೇವಾಲಯಗಳಲ್ಲಿ ಗರ್ಭಗೃಹವು ದೇವಾಲಯದ ಒಳ ಭಾಗದಲ್ಲಿಯೇ ಸೇರಿರುತ್ತಿತ್ತು. ಗರ್ಭಗೃಹದ ಸುತ್ತಲು "ಪ್ರದಕ್ಷಿಣಾಪಥ"ಕ್ಕೆ ಅವಕಾಶವಿರಲಿಲ್ಲ. ಕ್ರಮೇಣ ಗರ್ಭಗೃಹ ರಂಗಮಂಟಪದಿಂದ ಬೇರೆಯಾಗಿ ಹಿಂದೆ ಸರಿಯಿತು. ಗರ್ಭಗೃಹದ ಮೇಲೆ ಮೂಡಿದ "ಶಿಖರ"ಕ್ಕೆ "ವಿಮಾನ" ಎಂದು ಹೆಸರಾಯಿತು. ಗರ್ಭಗೃಹಕ್ಕೂ ರಂಗಮಂಟಪಕ್ಕೂ ಮಧ್ಯೆ ಉತ್ಸವ ಮೂರ್ತಿ ಮತ್ತು ಪೂಜಾಸಾಮಗ್ರಿಗಳನ್ನಿಡಲು ಒಂದು ಮಂಟಪ ಏರ್ಪಟ್ಟು ಅದನ್ನು "ಸುಖನಾಸಿ" ಎಂದು ಕರೆಯಲಾಯಿತು. ಸುಖನಾಸಿಯು

ಮುಂದಿನ ರಂಗ ಮಂಟಪವು ಅನೇಕ ಕಂಬಗಳಿಂದ ಕೂಡಿ 'ನವರಂಗ' ವೆನಿಸಿಕೊಂಡಿತು. ಈ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣವಾಗಿರುವ ಅಸಂಖ್ಯಾತ ದೇವಾಲಯಗಳಲ್ಲಿ ಒಂದಾದ "ಹುಚ್ಚು ಮಲ್ಲಿ ಗುಡಿ"ಯನ್ನು ಇಲ್ಲಿ ಮಾದರಿಯಾಗಿ ತೆಗೆದುಕೊಳ್ಳಬಹುದು. ಚಾಲುಕ್ಯ ದೇವಾಲಯದ ಮುಖ್ಯ ಭಾಗವಾದ ಗರ್ಭಗೃಹವನ್ನು ರಂಗಮಂಟಪದಲ್ಲಿ ಅಳವಡಿಸಿರುವ ರೀತಿ ವಿಶಿಷ್ಟವಾಗಿದೆ. ಈ ದೇವಾಲಯವು ಮುಖಮಂಟಪ, ಸುಖನಾಸಿ, ಗರ್ಭಗೃಹದ ಇಕ್ಕೆಲಗಳಲ್ಲಿ ಹಜಾರಗಳು, ಇವುಗಳಿಂದ ರಚಿತವಾಗಿದೆ. ಪಶ್ಚಿಮದ ಕಡೆ ಮುಖ ಮಾಡಿರುವ ಈ ದೇವಾಲಯವು ದುರ್ಗಾದೇವಾಲಯಕ್ಕೆ ಎದುರಾಗಿದೆ. ಮುಖಮಂಟಪಕ್ಕೆ ಎಂಟು ಮೆಟ್ಟಿಲುಗಳಿವೆ. ರಂಗಮಂಟಪ ಆಯತಾಕಾರವಾಗಿದ್ದು ಮಧ್ಯ ಮಂಟಪ ನಾಲ್ಕು ಕಂಬಗಳಿಂದ ಕೂಡಿದೆ ಮತ್ತು ರಂಗಮಂಟಪಕ್ಕಿಂತ ಸ್ವಲ್ಪ ಎತ್ತರವಾಗಿದ್ದು ಒಂದು ಚಿಕ್ಕ ವೇದಿಕೆಯಂತಿದೆ. ಮಧ್ಯ ಮಂಟಪಕ್ಕೂ ಮತ್ತು ಗರ್ಭ ಗೃಹಕ್ಕೂ ಮಧ್ಯೆ ಸುಖನಾಸಿಯನ್ನು ಹೋಲುವ ಒಂದು ಅರ್ಧಮಂಟಪವಿದೆ. ಸುಖನಾಸಿ ಇಕ್ಕೆಲಗಳಲ್ಲಿ ಒಂದೊಂದು ಬಾಗಿಲು ಇದ್ದು ಗರ್ಭಗೃಹಕ್ಕೆ ಪ್ರದಕ್ಷಿಣಾಪಥವೇರ್ಪಟ್ಟಿದೆ.

ಬಾಗಿಲುಗಳು ಸ್ವಲ್ಪ ಮಟ್ಟಿಗೆ ಅಲಂಕಾರದಿಂದ ಕೂಡಿದ್ದರೂ ಸಹ ದೇವಾಲಯದ ಒಳಭಾಗದಲ್ಲಿ ಯಾವುದೇ ಕೆತ್ತನೆಯ ಅಲಂಕಾರವಿಲ್ಲ. ದೇವಾಲಯದ ಕಂಬಗಳು ಚೌಕಾಕಾರವಾಗಿದ್ದು ಕೋನಾಕೃತಿಯ ಬೋದಿಗೆಗಳಿಂದ ಕೂಡಿವೆ. ಶಿಖರ ಔತ್ತರೇಯ ಶೈಲಿಯನ್ನು ಪಡೆದಿದೆ. "ಇದು ಭುವನೇಶ್ವರದ ಪರಶುರಾಮ ದೇವಾಲಯದ ಶಿಖರವನ್ನು ಹೋಲುತ್ತದೆ" ಎಂದು ಕಸಿನ್ಸ್‌ರವರು ಅಭಿಪ್ರಾಯ ಪಟ್ಟಿದ್ದಾರೆ.

ಬಾದಾಮಿ ಚಾಲುಕ್ಯರ ನಂತರ ಪ್ರಬಲರಾದ ರಾಷ್ಟ್ರಕೂಟರು ಚಾಲುಕ್ಯ ಶೈಲಿಯನ್ನೇ ಅನುಸರಿಸಿದರೂ ಸಹ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ದೇವಾಲಯ ಮತ್ತು ಗುಹಾಲಯಗಳನ್ನು ನಿರ್ಮಿಸಿದರು. ಇವುಗಳು ಹೆಚ್ಚಿಗೆ ಶೈವ ದೇವಾಲಯಗಳೇ ಆಗಿವೆ. ಇವರ ಕಾಲದಲ್ಲಿ ಎಲ್ಲೋರದಲ್ಲಿ ನಿರ್ಮಿತವಾದ ಅನೇಕ ಗುಹಾಲಯಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು. ಕೈಲಾಸ ದೇವಾಲಯ, ನೀಲಕಂಠ ಗುಹೆ, ಇಂದ್ರ ಸಭಾ, ಜಗನ್ನಾಥ ಸಭಾ ಮುಂತಾದವು.

ಈ ಎಲ್ಲಾ ದೇವಾಲಯಗಳು ಶಿಲ್ಪ ಕಲೆಗೆ ರಾಷ್ಟ್ರಕೂಟರ ಅಮೋಘ ಕೊಡುಗೆಗಳಾದರೂ ಸಹ ಕೈಲಾಸ ದೇವಾಲಯ ಗುಹಾಂತರ್ದೇವಾಲಯಗಳಲ್ಲಿ ಏಕಮೇವಾದ್ವಿತೀಯವಾಗಿದೆ. ಅಂದಿನ ಸಮರ್ಥ ಕರ್ನಾಟಕ ಚಕ್ರವರ್ತಿ ಒಂದನೆಯ ಕೃಷ್ಣನ ಕಾಲದಲ್ಲಿ ಎಲ್ಲೋರದಲ್ಲಿ ಒಂದು ಬೃಹತ್ ಗುಡ್ಡವನ್ನು ಕತ್ತರಿಸಿ ದೇವಾಲಯ ನಿರ್ಮಾಣಕ್ಕೆ ಅವಶ್ಯಕವಾದ ೨೦೦ ಅಡಿ ಉದ್ದ ೧೦೦ ಅಡಿ ಅಗಲ ೧೦೦ ಅಡಿ ಎತ್ತರದ ಒಂದು ಸಮತಲಾಕೃತಿಯಲ್ಲಿ ಕಂಡರಿಸಿದ ಈ ದೇವಾಲಯದಲ್ಲಿ ಭವ್ಯವಾದ ಮಹಾದ್ವಾರ, ನಂದಿ ಮಂಟಪ, ಧ್ವಜ ಸ್ತಂಭಗಳು, ಗೋಡೆಗಳ ಮೇಲೆ ಶಿವ ಪಾರ್ವತಿಯರ ಪಗಡೆ, ತ್ರಿಮುಖ ವಿಗ್ರಹ ತ್ರಿಮೂರ್ತಿ ಮುಂತಾದ ಪೌರಾಣಿಕ ಚಿತ್ರಗಳು ಸಜೀವವಾಗಿವೆಯೋ ಎಂಬಂತಿದ್ದು ನೋಟಕ ತನ್ನ ಇರವನ್ನು ಮರೆತು ಕೈಲಾಸವನ್ನೇ ಪ್ರವೇಶಿಸಿದವನಂತೆ ತನ್ಮಯನಾಗಿ ಮೈ ಮರೆಯುತ್ತಾನೆ. ಇಂತಹ ಒಂದು ಶ್ರೇಷ್ಠ ದೇವಾಲಯವನ್ನು ಕನ್ನಡ ಜನತೆಗೆ ವಾಸ್ತು ಶಿಲ್ಪ ಕಲೆಗೆ ಅಷ್ಟೇಕೆ ಜಗತ್ತಿಗೆ ಕೊಟ್ಟ ಕನ್ನಡಿಗರ ಹೆಮ್ಮೆಯ ಚಕ್ರವರ್ತಿ ಒಂದನೆಯ ಕೃಷ್ಣ. ಇಂತಹ ಚಕ್ರವರ್ತಿಯನ್ನು ಪಡೆದ ಕನ್ನಡ ನಾಡು ಜನತೆ, ಧನ್ಯ.

ಮೂರನೆಯ ಕೃಷ್ಣನ ಸಾಮಂತ ಗಂಗ ರಾಚಮಲ್ಲನ ಮಂತ್ರಿ ಮತ್ತು ಸೇನಾಪತಿಯಾಗಿದ್ದ ಚಾವುಂಡರಾಯ ಜಾಗತಿಕ ಶಿಲ್ಪ ಕಲೆಗೆ ಕೊಟ್ಟ ಕೊಡುಗೆ ಗೊಮ್ಮಟಮೂರ್ತಿ. ೫೭ ಅಡಿ ಎತ್ತರದ ಬಾಹುಬಲಿಯ ಧ್ಯಾನಸ್ಥ ದಿವ್ಯದೃಷ್ಟಿಸೂಚಕ ನಯನಗಳು, ಮಂದಹಾಸ ಪ್ರಫುಲ್ಲಿತ ಮುಖವು ಭಕ್ತಿ ಭಾವವನ್ನು ಉಂಟುಮಾಡುತ್ತವೆ. ಅದರ ಬೃಹತ್ತು, ಮಹತ್ತು, ಔನ್ನತ್ಯ, ಸೌಂದರ್ಯ, ಗಾಂಭೀರ್ಯಗಳಿಗೆ ಅದಕ್ಕೆ ಅದೇ ಸಾಟಿ, ಕನ್ನಡದ ಕವಿ ಬೊಪ್ಪಣ, "ಔನ್ನತ್ಯಮುಂ ನುತ ಸೌಂದರ್ಯಮುಂ, ಊರ್ಜಿತ ಅತಿಶಯಮುಂ ತನ್ನಲ್ಲಿ ನಿಂದಿರ್ದುವು ಏಂ ಕ್ಷಿತಿಸಂಪೂಜ್ಯಮೋ ಗೊಮ್ಮಟೇಶ್ವರ ಜಿನ ಶ್ರೀ ರೂಪಂ …………" ಎನ್ನುತ್ತಾನೆ. ಒಟ್ಟಿನಲ್ಲಿ ಗೊಮ್ಮಟಮೂರ್ತಿ ಕರ್ನಾಟಕಶಿಲ್ಪ ಕಲೆಯ ವೈಜಯಂತಿಯಂತಿದೆ.

ರಾಷ್ಟ್ರಕೂಟರ ನಂತರ ಬಾದಾಮಿ ಚಾಲುಕ್ಯರ ವಂಶಜರೇ ಆದ ಕಲ್ಯಾಣಿ ಚಾಲುಕ್ಯರು ಪ್ರಬಲರಾದ ಕಾಲದಲ್ಲಿ ಚಾಲುಕ್ಯ ವಾಸ್ತು ಶಿಲ್ಪಶ್ರೀ ಹೆಚ್ಚಿನ ಅಲಂಕಾರವನ್ನು ಪಡೆದಳು. ಇಲ್ಲಿ ಹೆಸರಿಸಬಹುದಾದ ಮುಖ್ಯ ದೇವಾಲಯಗಳೆಂದರೆ ಲಕ್ಕುಂಡಿಯ ಕಾಶಿ ವಿಶ್ವೇಶ್ವರ ದೇವಾಲಯ ಮತ್ತು ದೇವಾಲಯ ಚಕ್ರವರ್ತಿ ಎಂದು ಶಾಸನಗಳು ಸಾರುವ ಇಟ್ಟಗಿಯ ಮಹಾದೇವಾಲಯ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವನ್ನು ಬಿಟ್ಟರೆ ಇಡೀ ಕರ್ನಾಟಕದ ದೇವಾಲಯಗಳಲ್ಲಿ ಸೌಂದರ್ಯದಲ್ಲಿ ಇದೇ ಪರಮ ಶ್ರೇಷ್ಠ ಎಂದು ಕಸಿನ್ಸ್‌ರವರು ತಮ್ಮ Chalukya Architecture ನಲ್ಲಿ ಅಭಿಪ್ರಾಯಪಟ್ಟಿದ್ದಾರೆ.

ಬಾದಾಮಿ ಚಾಲುಕ್ಯರ ವಾಸ್ತುಶಿಲ್ಪದಲ್ಲಿ ಪ್ರಾರಂಭವಾದ "ವೇಸರ" ಪದ್ಧತಿಯು ಹೊಯ್ಸಳರ ಕಾಲದಲ್ಲಿ ಹೊಸ ರೀತಿಯನ್ನು ಪಡೆದು ತನ್ನ ಪರಾಕಾಷ್ಠತೆಯನ್ನು ಮುಟ್ಟಿತು. ಇಲ್ಲಿ ಕೆಲವು ಪ್ರಮುಖ ವೈವಿಧ್ಯಗಳನ್ನು ಕಂಡಂತೆ ಗುರುತಿಸಬಹುದು. ಮೊದಲನೆಯದಾಗಿ ಇದರ ತಲವಿನ್ಯಾಸ. ಎಲ್ಲ ದೇವಾಲಯಗಳು ಸುಮಾರು ಎತ್ತರದ ಜಗುಲಿಗಳ ಮೇಲೆ ಬಹು ಕೋನಾಕಾರವಾಗಿ ರಚನೆಗೊಂಡಿವೆ. ಎರಡನೆಯದಾಗಿ ಗರ್ಭಗೃಹದ ಸುತ್ತ ಪ್ರದಕ್ಷಿಣಾಪಥದಲ್ಲಿ ಎಲ್ಲ ದೇವಾಲಯಗಳ ಗೋಡೆಗಳ ಮೇಲೆ ಕಂಡು ಬರುವ ಅಲಂಕಾರ ಪಟ್ಟಿಕೆಗಳು, ಇಲ್ಲಿ—ಆನೆ, ಕುದುರೆ ಶಾರ್ದೂಲ,ಹಂಸ,ಬಳ್ಳಿಗಳಿವೆ.ಇಲ್ಲಿ ರಾಮಾಯಣ ಮಹಾ ಭಾರತಗಳ ಕಥೆಗಳನ್ನು ವ್ಯವಸ್ಥಿತವಾಗಿ ಕೆತ್ತಲಾಗಿದೆ. ಮೂರನೆಯ ಅಂಶವೆಂದರೆ ಶಿಖರಗಳು. ಇವು ಅಡ್ಡಡ್ಡವಾಗಿ ಹೆಣೆದಿರುವ ತಂತು ವಿನ್ಯಾಸದ ರಚನೆಯ ಅಲಂಕಾರ ಪಟ್ಟಿಕೆಗಳನ್ನು ಒಳಗೊಂಡಿವೆ. ನಾಲ್ಕನೆಯದಾಗಿ ಕಂಬಗಳು ದುಂಡಾಗಿದ್ದು ಕೆತ್ತನೆಯಲ್ಲಿಯೂ, ನಕ್ಷೆಗಳಲ್ಲಿಯೂ ಚಿತ್ರಣಗಳಲ್ಲಿಯೂ ವಿಪುಲ ವೈವಿಧ್ಯತೆಯನ್ನು ಪಡೆದಿವೆ. ಮತ್ತೊಂದು ಮುಖ್ಯ ಗಮನಾರ್ಹ ಅಂಶವೆಂದರೆ ಅಲ್ಲಿನ ಭುವನೇಶ್ವರಿಗಳು [ನಾಲ್ಕು ಕಂಬಗಳ ನಡುವಿನ ಮೇಲ್ಛಾವಣಿಯಲ್ಲಿರುವ ಕೆತ್ತನೆ] ಇವುಗಳಲ್ಲಿನ ಆಕಾರ ವಿನ್ಯಾಸ ನಕ್ಷೆಗಳಲ್ಲಿನ ವೈವಿಧ್ಯತೆ, ಸೂಕ್ಷ್ಮತೆ, ನಯವಂತಿಕೆ ಇವು ಮೆಚ್ಚುವಂತಹವು.

ಹೊಯ್ಸಳ ವಾಸ್ತುಶಿಲ್ಪ ದೃಷ್ಟಿಯಿಂದ ಹೊಯ್ಸಳ ರಾಜರ ಮೂರು ತಲೆಗಳನಂತರ ಪಟ್ಟಕ್ಕೆ ಬಂದ ಬಿಟ್ಟಿದೇವ ಮತ್ತು ಇವನ ಧರ್ಮಪತ್ನಿ ಶಾಂತಲಾದೇವಿಯವರು ಬಹು ಮುಖ್ಯರಾದವರು. ವಿಷ್ಣುವರ್ಧನನ [ಬಿಟ್ಟಿದೇವ] ಸರ್ವಧರ್ಮ ಸಹಿಷ್ಣುತೆ, ಸಾಹಿತ್ಯ ಇತ್ಯಾದಿ ಲಲಿತ ಕಲೆಗಳಲ್ಲಿನ ಆಸಕ್ತಿ ಹಾಗೂ ನೃತ್ಯ ಸರಸ್ವತಿಯೆಂದು ಹೆಸರುಗಳಿಸಿದ ಶಾಂತಲಾದೇವಿಯ ಸಂಗೀತ, ಮತ್ತು ನರ್ತನ ಪ್ರೇಮಗಳು ಸಮ್ಮಿಲನಗೊಂಡು ಹೊಯ್ಸಳ ವಾಸ್ತುಶಿಲ್ಪದ ಉಚ್ಛ್ರಾಯ ಸ್ಥಿತಿಗೆ ಕಾರಣವಾದವು. ಈ ಕಾಲದಲ್ಲಿ ಹಳೇಬೀಡಿನ ಪಾರ್ಶ್ವನಾಥ ಬಸದಿ. ಶಿವಗಂಗೆ ದೇವಸ್ಥಾನ, ದೊಡ್ಡ ಗದ್ದವನಹಳ್ಳಿಯ ಸಿದ್ಧೇಶ್ವರ ದೇವಸ್ಥಾನಗಳೇ ಮೊದಲಾಗಿ ಬೇಲೂರು, ಹಳೇಬೀಡುಗಳ ಜಗದ್ವಿಖ್ಯಾತ ದೇವಾಲಯಗಳು ರೂಪುಗೊಂಡವು. ಕರ್ನಾಟಕ ಶಿಲ್ಪ ಶಾಸ್ತ್ರದ ಪ್ರಮುಖರೆಂದು ಪರಿಗಣಿಸಲಾಗಿರುವ ಜಕ್ಕಣ, ಡಂಕಣ, ಮಾಯಣ, ದಾಸೋಜ,

ಮೊದಲಾದ ರೂವಾರಿಗಳು ಇವನ ಕಾಲದಲ್ಲಿದ್ದರು. "ಹಳೇಬೀಡು ಹೊರಗೆ ನೋಡು, ಬೇಲೂರ ಒಳಗೆ ನೋಡು" ಎಂಬ ಗಾದೆ ಮಾತಿನಂತೆ ಹಳೇಬೀಡಿನ ಹೊರಗೆ ನೋಡಿ ನಂತರ ಬೇಲೂರಿನ ಒಳಗು ನೋಡಿದರೆ ಹೊಯ್ಸಳ ವಾಸ್ತು ಶಿಲ್ಪದ ಸೌಂದರ್ಯವನ್ನು ಚೆನ್ನಾಗಿ ಕಾಣಬಹುದು.

ಹೊಯ್ಸಳ ದೇವಾಲಯಗಳ ಹೊರಭಾಗದ ಸೌಂದರ್ಯಕ್ಕೆ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವನ್ನು ಹೆಸರಿಸಬಹುದು. ಕ್ರಿ. ಶ. ೧೧೪೦ ರಲ್ಲಿ ಅಂದರೆ ವಿಷ್ಣುವರ್ಧನನ ಕಾಲದಲ್ಲಿ ಇದರ ನಿರ್ಮಾಣ ಕಾರ್ಯ ಪ್ರಾರಂಭವಾಗಿ ಇದರ ಗೋಪುರ ಪೂರ್ಣಗೊಳ್ಳದೆಯೇ ಮಲ್ಲಿಕಾಫರನ ಧಾಳಿಯಿಂದಾಗಿ ಈ ಭವ್ಯ ದೇಗುಲ ಅಪೂರ್ಣಗೊಂಡುದೇ ಅಲ್ಲದೆ ಭಗ್ನಾವಸ್ಥೆಗೂ ಇಳಿಯಿತು ಈಗಿನ ಭಗ್ನಸ್ಥಿತಿಯಲ್ಲಿಯೂ ಸಹ ತನ್ನದೇ ಆದ ವೈಶಿಷ್ಟ್ಯದಿಂದ ಮೆರೆಯುತ್ತಿದೆ ಇದರ ರಚನೆಯ ಸ್ಥೂಲರೂಪವು ಹೀಗಿದೆ: ದೇವಾಲಯವು ಐದಡಿ ಎತ್ತರದ ಜಗಲಿಯ ಮೇಲೆ ನಕ್ಷತ್ರಾಕಾರವಾಗಿ ಪೂರ್ವಕ್ಕೆ ಮುಖ ಮಾಡಿ ನಿಂತಿದೆ. ಪೂರ್ವಕ್ಕೆ ಎರಡು ಬಾಗಿಲು ಉತ್ತರಕ್ಕೆ ಒಂದು ದಕ್ಷಿಣಕ್ಕೆ ಒಂದು ಒಟ್ಟು ನಾಲ್ಕು ಬಾಗಿಲುಗಳಿವೆ. ದ್ವಾರಗಳ ಮುಖದಲ್ಲಿ ತಾಂಡವೇಶ್ವರನನ್ನು ಕೆತ್ತಲಾಗಿದೆ. ಪೂರ್ವದ ಒಂದು ಬಾಗಿಲು ಹಾಗೂ ಉತ್ತರದ ಬಾಗಿಲುಗಳ ಮುಂದೆ ಒಂದೊಂದು ದ್ವಾರಪಾಲ ವಿಗ್ರಹಗಳಿವೆ. ಪೂರ್ವದ ಮತ್ತೊಂದು ದ್ವಾರ ಹಾಗೂ ದಕ್ಷಿಣದ ದ್ವಾರಗಳಲ್ಲಿ ಎರಡೆರಡು ದ್ವಾರಪಾಲಕ ವಿಗ್ರಹಗಳು ಇವೆ. ದಕ್ಷಿಣದ್ವಾರ ಉಳಿದೆಲ್ಲಾ ದ್ವಾರಗಳಿಗಿಂತ ಅತಿ ಸುಂದರವಾದ ಕೆತ್ತನೆಗಳಿಂದ ಕೂಡಿದೆ. ದೇವಾಲಯದ ಹೊರ ಗೋಡೆಗಳ ಮೇಲೆ ಚಿತ್ರ ಪಟ್ಟಿಕೆಗಳ ಸಾಲುಗಳಿವೆ. ಈ ಚಿತ್ರಪಟ್ಟಿಕೆಗಳಲ್ಲಿ ಆನೆಗಳು, ಸಿಂಹಗಳು, ಬಳ್ಳಿಗಳು, ಋಷಿ ಸಿದ್ಧರು ಹೀಗೆ ಅನೇಕ ಚಿತ್ರಗಳಿಂದ ಕೂಡಿದೆ. ಒಂದೊಂದು ಚಿತ್ರ ಪಟ್ಟಿಕೆಯ ಉದ್ದ ಸುಮಾರು ೧೭೦ ಅಡಿಗಳಷ್ಟಾಗಬಹುದು. ಇಲ್ಲಿಯ ಬಹುಮುಖ್ಯ ಅಂಶವೆಂದರೆ ಈ ದೇವಾಲಯವು ಎರಡು ಗರ್ಭಗುಡಿಗಳಿಂದ ಕೂಡಿದೆ. ಎರಡು ಗರ್ಭಗುಡಿಗಳ ಮಾದರಿಯನ್ನು ನಂದಿಬೆಟ್ಟದ ಮೇಲೆ ನಂದಿಕೇಶ್ವರ ದೇವಾಲಯದಲ್ಲಿ ಕಾಣಬಹುದು. ಇಲ್ಲಿ ಕೆಲವು ರೂವಾರಿಗಳ ಮಲ್ಲರ ಹೆಸರುಗಳೂ ದೊರೆತಿವೆ; ಮಾಬಲ, ಬಲ್ಲಣ, ಬೋಚಣ, ಕೇತಣ, ದೇವೋಜ ಇತ್ಯಾದಿ.

ವಿಷ್ಣುವರ್ಧನನು ವೈಷ್ಣವನಾದುದರ ಸ್ಮರಣಾರ್ಥವಾಗಿ ನಿರ್ಮಾಣವಾದ ಚೆನ್ನಕೇಶವ ದೇವಾಲಯ ಸುಮಾರು ೪೪೦ ಅಡಿ ಉದ್ದ ೩೯೬ ಅಡಿ ಅಗಲವಿದೆ. ಸುತ್ತಲೂ ಪ್ರಾಕಾರವಿದ್ದು ಅಂಗಳದಲ್ಲಿ [ಅಮ್ಮನವರ ಗುಡಿ, ಕಪ್ಪೆ ಚೆನ್ನಿಗರಾಯನ ಗುಡಿ; ವೀರ ನಾರಾಯಣ ಸ್ವಾಮಿಯ ಗುಡಿ ಇವೆ. ಇವುಗಳ ಮಧ್ಯೆ ಚೆನ್ನಕೇಶವ ದೇವಾಲಯ ಕಂಗೊಳಿಸುತ್ತಿದೆ ಪೂರ್ವ, ಉತ್ತರ, ದಕ್ಷಿಣಗಳಿಗೆ ಒಂದೊಂದು ದ್ವಾರಗಳಿವೆ. ಒಳ ಹೊಕ್ಕರೆ ಚೆನ್ನಕೇಶವನ ಅಂತಃಪುರವನ್ನು ಕಾಣಬಹುದು. ಇಲ್ಲಿಯೂ ಚಿತ್ರ ಪಟ್ಟಿಕೆಗಳಿವೆ. ದಶಾವತಾರದ ಚಿತ್ರಗಳು, ಕಡಲೆ ಗಾತ್ರದ ಕಡಲೆ ಬಸವಣ್ಣ, ಅಷ್ಟ ದಿಕ್ಪಾಲಕರು ಮುಂತಾದ ವಿಗ್ರಹಗಳಿವೆ. ಜಗತ್ತಿನ ವಾಸ್ತು ಶಿಲ್ಪಕ್ಕೇ ಸವಾಲೆನಿಸುವ ಪ್ರಪಂಚದ ಎಲ್ಲ ಜನರ ಪ್ರಶಂಸೆಗೂ ಪಾತ್ರವಾದವು ಶಿಲಾ ಬಾಲಿಕೆಯರು—ಇವು ಕಂಬದ ಬೋದಿಗೆಯ ಮೇಲೆ ಸೂರಿಗೆ ಊರೆಯಾಗಿ ನಾಟ್ಯ ಭಂಗಿಯಲ್ಲಿ ನಿಂತಿವೆ ದೇವಾಲಯದ ಸುತ್ತ ಇಂತಹ ೩೮ ವಿಗ್ರಹಗಳಿವೆ. ಪ್ರತಿ ವಿಗ್ರಹವೂ ವೈವಿಧ್ಯದಿಂದ ಕೂಡಿದ್ದು ವಿವಿಧ ಭಾವಗಳನ್ನು ಪ್ರಕಟಪಡಿಸುತ್ತಿವೆ. ಈ ಶಿಲಾ ಬಾಲಿಕೆಯರ ಭಾವಗಳನ್ನು ಡಿ ವಿ. ಗುಂಡಪ್ಪನವರು ತಮ್ಮ "ಅಂತಃಪುರ ಗೀತೆ"ಗಳಲ್ಲಿ ಗೇಯಾತ್ಮಕವಾಗಿ ತಾಳಲಯಬದ್ಧವಾಗಿ ಕರ್ನಾಟಕ ಸಂಗೀತಕ್ಕೆ ಅಮೂಲ್ಯ ಉಪಾಯನದೋಪಾದಿಯಲ್ಲಿ ವಿವರಿಸಿದ್ದಾರೆ.

ಹೊಯ್ಸಳ ಶಿಲ್ಪದ ಭವ್ಯತೆಗೆ ದೇವಾಲಯದ ಮಧ್ಯೆ ಇರುವ ಕಂಬಗಳ ಮೇಲಿರುವ ಮದನಿಕೆಯರಲ್ಲಿ ಒಬ್ಬಳ ಕೈ ಮೇಲೆ ಗಿಳಿ ಕುಳಿತಿದೆ. ಆ ವಿಗ್ರಹಕ್ಕೆ ಅತಿ ಸೂಕ್ಷ್ಮವಾದ ಕುಸುರಿ ಕೆಲಸದಿಂದ ಕೂಡಿದ ಬಳೆಗಳನ್ನು ವಿಗ್ರಹದ ಕೈಯಲ್ಲೇ ಇರುವಂತೆ ಕಡೆದಿದ್ದಾನೆ. ಆ ಬಳೆಗಳನ್ನು ತಿರುಗಿಸಬಹುದು ಎಂದ ಮೇಲೆ ಸೂಕ್ಷ್ಮತೆ ಎಷ್ಟೆಂದು ತಿಳಿಯಬಹುದು. ಇಂತಹ ಅಂತಃಪುರದ ಸಖಿಯರಿಂದ ಕೂಡಿದ ಚೆನ್ನಕೇಶವ ವೈಕುಂಠವನ್ನು ಬಿಟ್ಟು ಬೇಲೂರಲ್ಲಿ ನೆಲಸಿದನೇನೋ ಎನ್ನಿಸುತ್ತದೆ. ಒಂದು ಆಳೆತ್ತರದ ಈ ಮೂರ್ತಿ ಶಂಖ, ಚಕ್ರ, ಗದಾ, ಪದ್ಮಧಾರಿಯಾಗಿ ದಶಾವತಾರಗಳನ್ನು ಕೆತ್ತಿದ ಪ್ರಭಾವಳಿಯಿಂದ ಕೂಡಿ, ಹಸನ್ಮುಖನಾಗಿ, ಸುಮಾರು ಮೂರು ಅಡಿ ಎತ್ತರದ ಪೀಠದ ಮೇಲೆ ನಿಂತು ಭಕ್ತರ ಹೃನ್ಮನಗಳನ್ನು ತಣಿಸುತ್ತಿರುವಂತಿದೆ. ಈ ದೇವಾಲಯದ ಒಂದೊಂದು ವಿಗ್ರಹದ ಮೇಲೂ ಒಂದೊಂದು ಗ್ರಂಥವನ್ನೇ ರಚಿಸಬಹುದಾದಷ್ಟು ಸೌಂದರ್ಯ ವೈವಿಧ್ಯದಿಂದ ಕೂಡಿದೆ. ಇಂತಹ ದೇವಾಲಯಗಳ ನಿರ್ಮಾಣಕ್ಕೆ ಆಶ್ರಯದಾತರಾದ, ಸ್ವತಃ ತಾವೇ ಕಲಾವಿದರಾದ ವಿಷ್ಣುವರ್ಧನ ಶಾಂತಲಾ ದೇವಿಯರನ್ನು ಮತ್ತೊಮ್ಮೆ ನೆನೆಯದಿದ್ದರೆ ತಪ್ಪಾದೀತು.

ಹೀಗೆ ಸಂಕರವಿಲ್ಲದ ಶುದ್ಧ ಕರ್ನಾಟಕ ಶೈಲಿಗೆ ಮಾದರಿಯಾಗಿ ನಿಂತಿವೆ ಈ ದೇವಾಲಯಗಳು. ಭಾವ ಸಂಪತ್ತಿನ ಅಭಿವ್ಯಕ್ತಿಯಲ್ಲಿ, ಸೂಕ್ಷ್ಮ ನಯಗೆಲಸದಲ್ಲಿ ಇವುಗಳನ್ನು ಮೀರಿಸುವ ಶಿಲ್ಪ ಮತ್ತೆ ಕರ್ನಾಟಕದಲ್ಲಿ ಎಲ್ಲೂ ಕಾಣುವುದಿಲ್ಲ. ಕಾಲಾನಂತರ ಹೊಯ್ಸಳ ವಂಶ ಕ್ಷೀಣಿಸಿ ಪರಕೀಯರ ದುರಾಕ್ರಮಣಗಳಿಗೆ ತುತ್ತಾಗಿ ಭಗ್ನಗೊಂಡ ಈ ದೇವಾಲಯಗಳನ್ನು ಹಿಂದೂ ಸಂಸ್ಕೃತಿಯ ಉದ್ಧಾರಕ್ಕಾಗಿಯೇ ಉದಿಸಿದ ವಿಜಯನಗರ ಸಾಮ್ರಾಜ್ಯ ಉಳಿಸಿಕೊಂಡು ಅವುಗಳ ಜೀರ್ಣೋದ್ಧಾರ ಮಾಡಿತು. ಹೊಯ್ಸಳ ಆದರ್ಶವನ್ನು ಮೈಗೂಡಿಸಿಕೊಂಡು ತನ್ನದೇ ಆದ ಪ್ರತ್ಯೇಕ ವೈಶಿಷ್ಟ್ಯದೊಡನೆ ಕರ್ನಾಟಕ ವಾಸ್ತು ಶಿಲ್ಪ ಪರಂಪರೆಯನ್ನು ಮುನ್ನಡೆಸಿಕೊಂಡು ಬಂದಿತು.

ಇಡೀ ದಕ್ಷಿಣ ಭಾರತಕ್ಕೆ ಧಾರ್ಮಿಕ ರಕ್ಷಣೆಯನ್ನು ಕೊಟ್ಟಂತೆ ಎಲ್ಲಾ ಕಲೆಗಳಿಗೂ ಆಶ್ರಯ ಸ್ಥಾನವಾಗಿತ್ತು ವಿಜಯ ನಗರ ಸಾಮ್ರಾಜ್ಯ. ಇದರ ಚಿರಸ್ಮರಣೀಯ ಸಾರ್ವಭೌಮ ಶ್ರೀಕೃಷ್ಣದೇವರಾಯ. ಇವನು ತಮ್ಮ ಅಂದರೆ ಹಿಂದಿದ್ದ ಚಕ್ರವರ್ತಿಗಳು ಬಿಟ್ಟು ಹೋದ ಕಲಾ ಸಂಪತ್ತನ್ನು ಉಳಿಸಿಕೊಂಡು ಹೊಸ ದೇವಾಲಯಗಳನ್ನೂ ಕಟ್ಟಿಸಿದುದಲ್ಲದೆ ದಕ್ಷಿಣ ಭಾರತದ ತಿರುಪತಿ, ತಾಡಿಪತ್ರಿ, ಕಾಂಚಿ, ಶ್ರೀರಂಗ, ಮಧುರೆ, ಚಿದಂಬರ ಮುಂತಾದೆಡೆಗಳಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಸಹಾಯಕನಾದ್ದರಿಂದ



ಬೇಲೂರ ದೇವಾಲಯದ ಒಂದು ಭಾಗ.
ಚಿತ್ರ : ಕೆ. ಜೈ.

ಇಡೀ ದಕ್ಷಿಣ ಭಾರತವು ಕೃಷ್ಣದೇವರಾಯನಿಗೆ ಋಣಿಯಾಗಿದೆ. ಈ ಚಕ್ರವರ್ತಿಯ ಕಾಲದಲ್ಲಿ ಹೊಸದಾಗಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಅವುಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು. ವಿದ್ಯಾಶಂಕರ ದೇವಾಲಯ, ವಿಜಯ ವಿಠ್ಠಲಸ್ವಾಮಿ ದೇವಾಲಯ, ಹಜಾರ ರಾಮಸ್ವಾಮಿ ದೇವಾಲಯ ಮುಂತಾದುವು. ಈ ಕಾಲದ ವಾಸ್ತು ವೈಶಿಷ್ಟ್ಯವೆಂದರೆ ದೇವಾಲಯದ ಕಂಬಗಳಲ್ಲಿ ಚಿಕ್ಕ ಚಿಕ್ಕ ಕಂಬಗಳನ್ನು ಕೊರೆದಿದೆ. ಕಂಬಗಳ ಮೇಲೆ ಕೆನೆಯುತ್ತಿರುವ ಕುದುರೆ ಮತ್ತು ಭಯಂಕರ ಪೌರಾಣಿಕ ಪ್ರಾಣಿಗಳ ಚಿತ್ರಗಳಿವೆ. ಇವುಗಳಲ್ಲಿ ಕೆಲವು ಕಂಬಗಳು ಎಂಟು ಅಥವ ಹದಿನಾರು ಮೂಲೆಗಳನ್ನೊಳಗೊಂಡಿವೆ. ಸಾಮಾನ್ಯವಾಗಿ ಚಾಚು ಪೀಠದ ತುದಿಗಳು ಬಾಗಿದ ಕಮಲದ ಮೊಗ್ಗಿನಾಕಾರವಾಗಿವೆ. ಇವು ವಿಜಯನಗರ ವಾಸ್ತು ಶಿಲ್ಪಕ್ಕೆ ಪ್ರತ್ಯೇಕ ವೈಶಿಷ್ಟ್ಯವನ್ನು ತಂದು ಕೊಟ್ಟಿವೆ. ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಾಣಗೊಂಡ ಅನೇಕ ದೇವಾಲಯಗಳಲ್ಲಿ ಹಜಾರ ರಾಮಸ್ವಾಮಿಯ ದೇವಾಲಯದ ವಿನ್ಯಾಸವನ್ನು ನೋಡುವ.

ಈ ದೇವಾಲಯವು ಪೂರ್ವಕ್ಕೆ ಮುಖ ಮಾಡಿದೆ. ಮುಖದ್ವಾರ ಮಂಟಪವನ್ನು ದಾಟಿದ ಮೇಲೆ ಕಪ್ಪು ಕಲ್ಲಿನ ಕಂಬಗಳು ಕೆತ್ತನೆಯಿಂದ ಕೂಡಿ ನಿರ್ಮಾಣಗೊಂಡ ರಂಗ ಮಂಟಪವಿದೆ. ಇದಕ್ಕೆ ಉತ್ತರ, ದಕ್ಷಿಣದ ಕಡೆಗೆ ದ್ವಾರಗಳಿವೆ. ಮತ್ತೊಂದು ಕಡೆ ಗರ್ಭಗೃಹಕ್ಕೆ ದ್ವಾರವಿದೆ. ಸುತ್ತಲೂ ಗೋಡೆಯಿಂದಾವೃತವಾದ ಅಂಗಳದ ಮಧ್ಯದಲ್ಲಿರುವ ದೇವಾಲಯದ ವಿಮಾನ ಗಂಭೀರಾಕರ್ಷಕವಾಗಿದೆ. ಗರ್ಭಗೃಹದ ಮೇಲೆ ವಿಮಾನವನ್ನು ನಿರ್ಮಿಸಲಾಗಿದೆ. ದೇವಾಲಯದ ಗೋಡೆಗಳ ಮೇಲೆ ಹೊಯ್ಸಳ ಶೈಲಿಯಲ್ಲಿರುವಂತೆ ಚಿತ್ರ ಪಟ್ಟಿಕೆಗಳಿವೆ. ಈ ಚಿತ್ರ ಪಟ್ಟಿಕೆಗಳಲ್ಲಿ ವಿವಿಧ ನಾಟ್ಯಭಂಗಿಯ ನರ್ತಕಿಯರ ವಿಗ್ರಹಗಳು ಮತ್ತು ರಾಮಾಯಣ ಮಹಾಭಾರತಗಳ ಕೆಲವು ದೃಶ್ಯಗಳು ಇವೆ. ಈ ದೇವಾಲಯವು ಅನೇಕ ಕಂಬಗಳ ಹಜಾರದಿಂದ ಕೂಡಿದ್ದು ಅರಮನೆಗೆ ಹತ್ತಿರದಲ್ಲಿ ಕಟ್ಟಿರುವುದರಿಂದ ಇದು ರಾಜವಂಶದ ಖಾಸಗಿ ದೇವಾಲಯವೆನಿಸುತ್ತದೆ.

ಇಷ್ಟೇ ಅಲ್ಲದೆ ಕ್ರಿ.ಶ. ಸುಮಾರು ೧೩೮೫ರ ಹಿಂದೆಯೇ ಇರುಗಪ್ಪ ನಾಯಕನಿಂದ ನಿರ್ಮಾಣಗೊಂಡ ಮಾಲ್ಯವಂತ ರಘುನಾಥ ದೇವಾಲಯ, ಕೋದಂಡರಾಮಸ್ವಾಮಿ ದೇವಾಲಯ ಮುಂತಾದ ದೇವಾಲಯಗಳನ್ನೂ ; ಕಡಲೇ ಕಾಳು ಗಣೇಶ, ಸಾಸಿವೆ ಗಣೇಶ ಮೊದಲಾದ ಶಿಲ್ಪಗಳನ್ನೂ ಇಲ್ಲಿ ಕಾಣಬಹುದು. ಕರ್ನಾಟಕದ ಎಲ್ಲ ಸಾಮ್ರಾಜ್ಯಗಳಿಗೂ ಅಧಿದೇವ ವಿರೂಪಾಕ್ಷ ಮತ್ತು ಭುವನೇಶ್ವರಿಯರ ದೇವಾಲಯಗಳು ಹಂಪೆಯಲ್ಲಿವೆ. ಇಂದೂ ಅವುಗಳಿಗೆ ಪೂಜಾವಿಧಿಗಳು ನಡೆಯುತ್ತಿವೆ.

ಕರ್ನಾಟಕ ವಾಸ್ತುಶಿಲ್ಪಕ್ಕೇ ಅಲ್ಲದೆ ಇಡೀ ಭಾರತೀಯ ವಾಸ್ತು ಶಿಲ್ಪಕ್ಕೇ ಅಮೂಲ್ಯ ಕೊಡುಗೆಗಳನ್ನು ಕೊಟ್ಟಿದ್ದಾರೆ; ಕರ್ನಾಟಕದ ರಾಜರು. ಕರ್ನಾಟಕದ ವಾಸ್ತುಶಿಲ್ಪ ಜಗದ್ವಿಖ್ಯಾತವಾಗಿದೆ. ಇಂತಹ ಭವ್ಯ ಪರಂಪರೆಯನ್ನು ಪಡೆದಿರುವ ಈ ದೇವಾಲಯಗಳು ಪರಕೀಯರ ಪರಧರ್ಮೀಯರ ಧಾಳಿಗಳಿಂದಾಗಿ ಭಗ್ನ ಸ್ಥಿತಿಗೆ ಇಳಿದಿವೆ. ಭಗ್ನಾವಸ್ಥೆಯಲ್ಲಿರುವ ದೇವಾಲಯ ಮತ್ತು ಶಿಲ್ಪಗಳು ತಮ್ಮ ಗತ ವೈಭವದ ಜೊತೆಗೆ ಇಂದಿನ ಅನಾಥತೆಯನ್ನು ಸಾರಿ ಹೇಳಲು ಇನ್ನೂ ಉಳಿದಿವೆ. ಇವುಗಳ ಮುಂದೆ ನಿಂತು ಇವೆಲ್ಲ ಕನ್ನಡಿಗರ ಸ್ವತ್ತು, ಹೆಮ್ಮೆಯ ಹೆಗ್ಗುರುತು ಎಂದೆನಿಸಿದರೂ ಅವುಗಳ ಇಂದಿನ ಭಗ್ನ ಹಾಗೂ ಅನಾಥ ಸ್ಥಿತಿಯನ್ನು ಕಂಡ ಪ್ರತಿ ಕನ್ನಡಿಗನ ಕಣ್ಣುಗಳೂ ಹನಿಗೂಡಿ ತಮ್ಮ ಹೃದಯದ ಒಂದೊಂದು ಭಾಗವೂ ಕಳಚಿಕೊಳ್ಳುತ್ತಿರುವಂತೆ ಅನ್ನಿಸುತ್ತದೆ.

ಒಂದು ಕಾಲದಲ್ಲಿ ವೈಭವದ ತುಟ್ಟತುದಿಯಲ್ಲಿ ಮೆರೆದ ಕರ್ನಾಟಕ ವಾಸ್ತುಶಿಲ್ಪ ಶಾರದೆ ಇಂದು ಹೆಳವಳಾಗಿದ್ದಾಳೆ ಎಂದರೆ ಏನೂ ತಪ್ಪಾಗಲಾರದು. ಈಗ ಇನ್ನೂ ದುಃಸ್ಥಿತಿಗಿಳಿಯುತ್ತಿರುವುದಕ್ಕೆ ಕಾರಣ ಸರ್ಕಾರದ ಔದಾಸೀನ್ಯ ಮನೋಭಾವ ಮತ್ತು ತಮ್ಮ ಹಿರಿಯರು ಬಿಟ್ಟು ಹೋಗಿರುವ ಅಪಾರ ಕಲಾಸಂಪತ್ತನ್ನು ನೋಡಲಾಗದಿದ್ದರೂ ಓದಿ ತಿಳಿಯಲಾದರೂ ಪ್ರಯತ್ನಿಸದ ಜನತೆ ಯೆಂದು ಧಾರಳವಾಗಿ ಹೇಳಬಹುದು. *

( ಸಾಧಾರ )

**ಮು. ಕೃಷ್ಣಪ್ಪ**

---

(16 ನೇ ಪುಟದಿಂದ)

ಅನಂತದೇವನು ಕೃಪೆಯಿಂದ ಕೂಡಿದವನಾಗಿ –

ಎಲೈ ಕೌಂಡಿನ್ಯನೇ! ನಿನ್ನ ಮನೆಗೆ ಹೋಗು ತಡಮಾಡಬೇಡ. ೧೪ ವರ್ಷಗಳಲ್ಲಿ ಅನಂತ ವ್ರತವನ್ನು ಭಕ್ತಿಯಿಂದ ಮಾಡು. ಸಕಲ ಪಾಪಗಳಿಂದ ಮುಕ್ತನಾಗಿ ಪರಿಶುದ್ಧ ಸ್ವರೂಪನಾಗಿ ಉತ್ತಮ ಸಿದ್ಧಿಯನ್ನು ಹೊಂದುವೆ. ಶೀಲೆಯು ಆಚರಿಸಿದ ಅನಂತವ್ರತ ಕಥೆಯನ್ನು ಯಾವನು ಕೇಳುತ್ತಾನೆಯೋ ಆಚರಿಸುತ್ತಾನೆಯೋ ಅವನು ಶೀಘ್ರವಾಗಿ ಪಾಪರಹಿತನಾಗಿ ಉತ್ತಮಗತಿಯನ್ನು ಹೊಂದುತ್ತಾನೆ ಎಂದು ಹೇಳಿ ಅಲ್ಲಿಯೇ ಅಂತರ್ಧಾನನಾದನು.

ನಂತರ ಈ ಕೌಂಡಿನ್ಯನು ಮನೆಗೆ ಬಂದು ೧೪ ವರ್ಷ ಈ ಉತ್ತಮವಾದ ವ್ರತವನ್ನು ಆಚರಿಸಿ ಸರ್ವ ಭೋಗಗಳನ್ನು ಹೊಂದಿ ಕೊನೆಗೆ ಅನಂತದೇವನ ಪುರವನ್ನೇ ಹೊಂದಿದನು.

ಈ ವ್ರತ ಕಥೆಯನ್ನು ಧರ್ಮರಾಜನು ಶ್ರವಣಮಾಡಿ ಶೀಘ್ರದಲ್ಲಿಯೇ ಆಚರಿಸಿ ಸಮಸ್ತ ರಾಜ್ಯಾಧಿಪತ್ಯವನ್ನು ಹೊಂದಿದನು.

ಯಾರು ಈ ಕಥೆಯನ್ನು ಕೇಳುತ್ತಾರೆಯೋ, ಯಾರು ತಾನೇ ಪಠಿಸುವರೋ ಆ ಸರ್ವರೂ ಪಾಪರಹಿತರಾಗಿ ವಿಷ್ಣು ಲೋಕವನ್ನು ಹೊಂದುತ್ತಾರೆ.

———

---

(14 ನೇ ಪುಟದಿಂದ)

ಕರುಣಾಬ್ಧಿ ವಸುಧೀಂದ್ರರಾಯರ ಕೃಪಾ ಬಲದಿ ।
ವಿರಚಿಸಿದೆವೀ ಗ್ರಂಥ ಪದರೂಪದಿ ।
ಅರಸಿಕನು ನಿಂದಿಸಲು ಕುಂದಾವುದಿದಕೆ ಭಾ–
ಸ್ಕರನುದಯ ಘೂಕ ದೂಷಿಸಿದ ತೆರವು ॥೨೫॥

ಧರ್ಮಾರ್ಥ ಕಾಮ ಮೋಕ್ಷಗಳೀವ ಗ್ರಂಥವಿದು
ನಿರ್ಮಾಣಮಾಡಿಸಿದ ರಾಮಚಂದ್ರ ॥
ಧರ್ಮಗರ್ಭಗೆ ಪೊಲಿದು ಪೇಳಿದ ಮಹಾ ಮಂತ್ರ
ಮರ್ಮಗಳನರಿತು ಜಪಿಸುವನೆ ಧನ್ಯ ॥೨೬॥

ವರದೇಂದ್ರ ಮುನಿರಚಿತ ಈ ತಂತ್ರ ಸಾರವನು।
ಬರೆದೋದಿ ಕೇಳಿ ನೋಡಿಪ ಸುಜನರ ॥
ವರಮೂಲರಾಮ ವೇದವ್ಯಾಸರಿಹ ಪರದಿ ।
ಕರುಣಿಪರು ಬೇಡಿದಿಷ್ಟಾರ್ಥಗಳನು ॥೨೭॥

ಮಂಗಳ ರಮಾಪತಿಗೆ ಮಂಗಳದ್ರುಹಿಣ ಪಿತಗೆ ।
ಮಂಗಳ ದಶಪ್ರಮತಿ ಮುನಿಮಾನ್ಯಗೆ ॥
ಮಂಗಳ ಶಿವೇಂದ್ರಾದಿ ಸುರನಿಕರ ಪೂಜ್ಯಗೆ
ಮಂಗಳ ಜಗದ್ವಿಲಕ್ಷಣ ಮೂರ್ತಿಗೆ ॥೨೮॥

ಇಪ್ಪತ್ತರೊಂಭತ್ತು ಪದಗಳೆಂಬತಿವಿಮಲ ।
ಪುಷ್ಪಮಾಲಿಕೆ ಮೂಲರಾಮನಡಿಗೆ ॥
ಅರ್ಪಿಸಿದೆ ವೀ ಸುಮನ ನಾಮವನನುದಿನದಲ್ಲಿ ।
ಒಪ್ಪವಿಹುದೇ ಬುಧರ ಮಸ್ತಕದಲಿ ॥೨೯॥

———

# ಕಿಶೋರ ಜಗತ್



## ಋಷ್ಯಶೃಂಗನ ಕಥೆ

**ಸುರೇಶ್ ಹೆಮ್ಮಿಗೆ**

ಅಂಗ ದೇಶದ ನೆರೆಯಲ್ಲಿ ನಯನಮನೋಹರವಾದ ಕಾಡೊಂದಿತ್ತು. ಅನೇಕ ಋಷಿಮುನಿಗಳು ಆ ಕಾಡಿನಲ್ಲಿ ತಮ್ಮ ನಿತ್ಯಕರ್ಮಗಳಾದ ಯಜ್ಞ ಯಾಗಾದಿ ತಪಸ್ಸುಗಳಿಂದ ಸಿದ್ಧಿ ಪಡೆದವರಾಗಿದ್ದರು. ಇದೇ ಕಾಡಿನ ಒಂದು ಮೂಲೆಯಲ್ಲಿ ಮನುಷ್ಯನು ಸುಳಿಯಲಸಾಧ್ಯವಾದ ದಟ್ಟಡವಿಯಲ್ಲಿ ತೇಜೋಮಹಿಮರಾದ ವಿಭಾಂಡಕ ಮಹರ್ಷಿಗಳು ತಮ್ಮ ಆಶ್ರಮವನ್ನು ಕಟ್ಟಿದರು. ಅವರ ಒಬ್ಬನೇಪುತ್ರನಾದ ಋಷ್ಯಶೃಂಗನೂ ಸಹ ತನ್ನ ತಂದೆಯ ಬಳಿಯಲ್ಲೇ ಇದ್ದನು. ವಿಭಾಂಡಕರು ತಮ್ಮ ಏಕೈಕ ಪುತ್ರನಾದ ಋಷ್ಯಶೃಂಗನನ್ನು ಆಜನ್ಮ ಪರ್ಯಂತ ನೈಷ್ಠಿಕ ಬ್ರಹ್ಮಚಾರಿಯಾಗಿಸಲು ಮಾನವ ಕುಲದ ಅರಿವನ್ನೇ ಮಾಡಿಕೊಟ್ಟಿರಲಿಲ್ಲ. ಆ ಕಾರಣದಿಂದಲೇ ಅವರು ಪುತ್ರನೊಡನೆ ಮನುಷ್ಯಸಂಚಾರವಿಲ್ಲದ ದಟ್ಟಡವಿಯಲ್ಲಿ ಆಶ್ರಮ ನಿರ್ಮಿಸಿಕೊಂಡಿದ್ದರು. ತತ್ಫಲವಾಗಿ ಋಷ್ಯಶೃಂಗತನ್ನ ತಂದೆಯನ್ನು ಬಿಟ್ಟು ಇನ್ನಾವ ಮಾನವನ ಪರಿಚಯವೂ ಇರಲಿಲ್ಲ.

ನಿತ್ಯವೂ ತನ್ನ ತಂದೆಯ ಆದೇಶದಂತೆ ಆಶ್ರಮದ ಎದುರಲ್ಲೇ ಇರುವ ಹೂದೋಟದಿಂದ ಪುಷ್ಪಗಳನ್ನು ತರುವುದು, ನೆರೆಯಲ್ಲಿ ಹರಿಯುವ ಸ್ಫಟಿಕ ಮಣಿಗಳಂತೆ ಶೋಭಿಸುವ ನದಿಯಲ್ಲಿ ಸ್ನಾನಮಾಡುವುದು, ಆಹ್ನಿಕ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿ ಬರುವಾಗ ಆ ದಿನಕ್ಕಾಗುವಷ್ಟು ದರ್ಭೆ ಹುಲ್ಲನ್ನು ಶೇಖರಿಸಿ ತರುವುದು, ಸೂರ್ಯನು ನಡುನೆತ್ತಿಗೆ ಬಂದಮೇಲೆ ತಂದೆಯೊಡನೆ ಕುಳಿತು ಜೀವನಾಧಾರಕ್ಕಾಗಿ ಮಾತ್ರ ಬೇಯಿಸಿಟ್ಟ ಗೆಡ್ಡೆಗೆಣಸುಗಳನ್ನು ತಿಂದು, ಮಧ್ಯಾಹ್ನದಲ್ಲಿ ಗ್ರಂಥಗಳನ್ನೂ ವೇದಗಳನ್ನೂ ಪಠಣ ಮಾಡಿ ಮನನ ಮಾಡುವುದು. ಸಾಯಂಕಾಲದಲ್ಲಿ ಮತ್ತೆ ನದಿಯಲ್ಲಿ ಮಿಂದು ಸಾಯಂಸಂಧ್ಯಾವಂದನಾದಿಗಳನ್ನು ಮುಗಿಸಿ ಆಶ್ರಮಕ್ಕೆ ಹಿಂತಿರುಗಿ, ತಂದೆಯ ಆದೇಶದಂತೆ ನಡೆಯುವುದು, ಇವಿಷ್ಟೂ ಋಷ್ಯಶೃಂಗನ ದಿನಚರಿಯಾಗಿದ್ದಿತು. ಇದಲ್ಲದೆ ವಿಭಾಂಡಕರ ಆಶ್ರಮದಲ್ಲಿ ಆಗಾಗ ಯಜ್ಞ ಹೋಮಾದಿಗಳು ನಡೆಯುದ್ದವು.

ವಿಭಾಂಡಕರು ನಿತ್ಯವೂ ಗೆಡ್ಡೆಗೆಣಸು ಹಣ್ಣುಹಂಪಲುಗಳನ್ನು ತರಲು ಹೋದಾಗಲೂ ಋಷ್ಯಶೃಂಗನನ್ನು ಕರೆದುಕೊಂಡು ಹೋಗುತ್ತಿರಲಿಲ್ಲ. ಈ ರೀತಿ ತಂದೆಯ ಆಸರೆಯಲ್ಲಿ ಬೆಳೆದ ಋಷ್ಯಶೃಂಗನು ಪ್ರಪಂಚದಲ್ಲಿ ತಾನು, ತನ್ನ ತಂದೆ, ಗಿಡ ಮರ ಮುಂತಾದ ನಿಸರ್ಗ ಮತ್ತು ದೇವರು ಇವಿಷ್ಟೇ ಎಂದು ಮನದಟ್ಟು ಮಾಡಿಕೊಂಡು ಬಿಟ್ಟಿದ್ದನು. ಇದರಿಂದ ಅವನ ಮನಸ್ಸು ಕಲ್ಮಷರಹಿತವಾಗಿ ಅವನ ಬ್ರಹ್ಮಚರ್ಯವು ಬಿರುಕಿಲ್ಲದೆ ನಿತ್ಯವೂ ವೃದ್ಧಿಸುತ್ತಾ ಅವನ ತೇಜಸ್ಸನ್ನು ಹೆಚ್ಚಿಸುತ್ತಿತ್ತು. ತಂದೆ ವಿಭಾಂಡಕರು ಇದರಿಂದಅತ್ಯಾನಂದ ಹೊಂದಿದವರಾಗಿ, ತಮ್ಮ ಪುತ್ರನು ಬ್ರಹ್ಮಚರ್ಯೆಯಿಂದ ಜಾರದಂತೆ ನೋಡಿಕೊಳ್ಳುತ್ತಿದ್ದರು.

ಹೀಗಿರುವಾಗ ಒಂದು ಸಲ ಅಂಗದೇಶದಲ್ಲಿ ಎಂದೂ ತಲೆದೋರಿರದ ಬರಗಾಲವು ಕಾಲಿಟ್ಟಿತು. ಮಾಸಗಟ್ಟಲೆ ನೀರು ಕಾಣದ ನೆಲಗಳು ಬಿರುಕು ಬಿಟ್ಟವು. ಬ್ರಾಹ್ಮಣರಿಗೆ ತಮ್ಮ ನಿತ್ಯಕರ್ಮ ಮಾಡುವುದಿರಲಿ, ತಮ್ಮ ಜೀವನಾಧಾರಕ್ಕೆ ಅನ್ನವನ್ನು ಸಂಪಾದಿಸುವುದೂ ಕಷ್ಟವಾಗುತ್ತಿತ್ತು. ಪ್ರಾಣಿಗಳೆಲ್ಲವೂ ಬಿಸಿಲ ತಾಪದಿಂದ ಅಸು ನೀಗಿದವು. ಆ ದೇಶದ ರಾಜನಾದ ರೋಮಪಾದನು ತನ್ನ ಖಜಾನೆಯಲ್ಲಿದ್ದ ದವಸಧಾನ್ಯಗಳಿಂದ ಪ್ರಜಾರಕ್ಷಣೆ ಮಾಡುತ್ತಿದ್ದನು. ಕಟ್ಟಿಟ್ಟ ಬುತ್ತಿ ಎಲ್ಲಿಯವರೆಗೆ ಬರುತ್ತದೆ ಹೇಳಿ. ಖಜಾನೆಯೆಲ್ಲಾ ಬರಿದಾಗುತ್ತ ಬಂದಿತು. ತತ್ಫಲವಾಗಿ ರೋಮಪಾದನ ಚಿಂತೆಯೂ ವೃದ್ಧಿಯಾಯಿತು. ರಾಜನು ಚಿಂತಾಗ್ರಸ್ತನಾಗಿರುವುದನ್ನು ಕಂಡ ಆಸ್ಥಾನದ ವಿಪ್ರೋತ್ತಮರು ರಾಜನನ್ನು ಕುರಿತು "ಪ್ರಭು! ಇಲ್ಲಿಂದ ಸ್ವಲ್ಪ ದೂರವಿರುವ ದಟ್ಟಡವಿಯಲ್ಲಿ ಋಷ್ಯಶೃಂಗ ಮಹರ್ಷಿಗಳು ತಮ್ಮ ತಂದೆಯಾದ ವಿಭಾಂಡಕರೊಡನೆ ವಾಸಿಸುತ್ತಿದ್ದಾರೆ. ಆ ನೈಷ್ಠಿಕ ಬ್ರಹ್ಮಚಾರಿಯಾದ ಋಷ್ಯಶೃಂಗರನ್ನು ನಮ್ಮ ದೇಶಕ್ಕೆ ಕರೆತಂದರೆ ನಮ್ಮ ದೇಶದ ದುಃಸ್ಥಿತಿ ಮಾಯವಾಗಿ ಸುಭಿಕ್ಷ ಉಂಟಾಗುತ್ತದೆ" ಎಂದರು.

ಬ್ರಾಹ್ಮಣರ ಮಾತನ್ನು ಸಮ್ಮತಿಸಿದ ರೋಮಪಾದನು ಪ್ರಪಂಚಜ್ಞಾನವಿಲ್ಲದ ಋಷ್ಯಶೃಂಗಮಹರ್ಷಿಗಳನ್ನು ಹೇಗಾದರೂ

ಮಾಡಿ ಅಂಗದೇಶಕ್ಕೆ ಕರೆತರಬೇಕೆಂದು ತನ್ನ ಆಸ್ಥಾನ ಸಖಿಗೆ ತಿಳಿಸಿದನು. ಪ್ರಜೆಗಳ ಸುಖಕ್ಕೆ ಏನು ಮಾಡುವುದಕ್ಕೂ ತಯಾರಿದ್ದ ಆ ಸಖಿಯು ಆ ವಿಷಯವನ್ನು ತಾನು ಪರಿಪಾಲಿಸುವುದಾಗಿ ರಾಜನಿಗೆ ವಚನವಿತ್ತಳು. ಸಂತೋಷಗೊಂಡ ರಾಜನು ಮುಂದಿನ ಕಾರ್ಯಕಲಾಪಗಳನ್ನು ನೋಡಲು ಹೋದನು.

ಇತ್ತ ಈ ಸಖಿಯು ಆಸ್ಥಾನದ ನೃತ್ಯಗಾರರಲ್ಲಿ ಅತ್ಯಂತ ಚೆಲುವೆಯರೂ ಬುದ್ಧಿವಂತರೂ ಆದ ನಾಲ್ವರು ತರುಣಿಯರನ್ನು ಆರಿಸಿಕೊಂಡಳು. ಅವರಿಗೆ ತನ್ನ ಧ್ಯೇಯವನ್ನು ತಿಳಿಸಿದಾಗ ಆ ತರುಣಿಯರು ಪ್ರಜೆಗಳ ಸೌಖ್ಯಕ್ಕಾಗುವ ಕಾರ್ಯವೆಂದರಿತು ಸಂತೋಷದಿಂದ ಒಪ್ಪಿಕೊಂಡರು.

ಇದಾದ ಮೇಲೆ ಆ ಸಖಿಯು ರಾಜನ ಸಹಾಯದಿಂದ ಒಂದು ವಿಶಾಲವಾದ ತೆಪ್ಪವನ್ನು ಕಟ್ಟಿಸಿದಳು. ಆದರ ಮೇಲೆಲ್ಲಾ ಫಲವತ್ತಾದ ಮಣ್ಣನ್ನು ಹರಡಿ ಅದರ ಮೇಲೆ ಗಿಡಮರಗಳನ್ನು ಬೆಳೆಸಲಾಯಿತು. ಆ ಗಿಡಮರಗಳ ಮಧ್ಯದಲ್ಲಿ ಒಂದು ಕೃತಕವಾದ ನಿಜವಾದ ಆಶ್ರಮನ್ನೇ ಹೋಲುವ, ಕುಟೀರವನ್ನು ನಿರ್ಮಿಸಲಾಯಿತು. ಇವಿಷ್ಟನ್ನೂ ಹೊತ್ತ ಆ ತೆಪ್ಪವನ್ನು ನದಿಯ ನೀರಿನ ಮೇಲೆ ತೇಲಿಬಿಟ್ಟಾಗ, ಅದು ಒಂದು ಸಣ್ಣ ದ್ವೀಪವೋ ಎಂಬಂತೆ ಭಾಸವಾಗುತ್ತಿತ್ತು.

ಒಂದು ಶುಭದಿವಸ ಆ ಸಖಿಯೂ ಸೇರಿದಂತೆ, ಮಿಕ್ಕ ನಾಲ್ವರು ತರುಣಿಯರು ಆ ದ್ವೀಪದಂತಿದ್ದ ತೆಪ್ಪವನ್ನು ಹತ್ತಿದರು. ಆ ನಾಲ್ವರಲ್ಲಿ ಅತ್ಯಂತ ಚೆಲುವೆಯಾದ ಒಬ್ಬಳನ್ನು ಆ ಕೃತಕ ಆಶ್ರಮದಲ್ಲಿರಿಸಲಾಯಿತು. ಮಿಕ್ಕವರೆಲ್ಲರೂ ಗಿಡಮರಗಳ ಹಿಂದೆ ಅವಿತುಕೊಂಡರು. ಎಲ್ಲವೂ ಸಜ್ಜಾದಮೇಲೆ ಆ ತೆಪ್ಪವನ್ನು ಕಳಚಿ ಬಿಡಲಾಯಿತು. ಅದು ನಿಧಾನವಾಗಿ ನದಿಯ ದಿಕ್ಕಿನಲ್ಲೇ ಸಾಗುತ್ತಾ ಹೊರಟಿತು. ದ್ವೀಪವೇ ಚಲಿಸುವಂತಿದ್ದ ಆ ದೃಶ್ಯ ಅತ್ಯಂತರಮಣೀಯವಾಗಿತ್ತು. ಬಹಳ ಹೊತ್ತಾದ ಮೇಲೆ ಆ ತೆಪ್ಪವು ದಟ್ಟಡವಿಯನ್ನು ಮುಟ್ಟಿತು. ಅವಿತುಕೊಂಡಿದ್ದ ನಾರಿಯರೆಲ್ಲಾ ಇಳಿದು ದಡದಲ್ಲಿದ್ದ ಒಂದು ಮರಕ್ಕೆ ತೆಪ್ಪವನ್ನು ಕಟ್ಟಿ ಹಾಕಿದರು. ಕೃತಕ ಆಶ್ರಮದಲ್ಲಿದ್ದ ಒಬ್ಬಳೇ ಚೆಲುವೆ ಮಾತ್ರ ಮೆಲ್ಲಗೆಹೆಜ್ಜೆಯಿಡುತ್ತಾ ವಿಭಾಂಡಕರ ಆಶ್ರಮಕ್ಕೆ ತೆರಳಿದಳು. ಆ ಸಮಯಕ್ಕೆ ಸರಿಯಾಗಿ ವಿಭಾಂಡಕರು ಆಶ್ರಮದಲ್ಲಿರಲಿಲ್ಲ. ಋಷ್ಯಶೃಂಗನೊಬ್ಬನೇ ಏನನ್ನೋ ಬರೆಯುತ್ತಾ ಕುಳಿತಿದ್ದನು. ಅವಳು ಧೈರ್ಯ ತಂದುಕೊಂಡು ಒಳಗೆ ನಡೆದಳು. ಎಂದೂ ಕಾಣದಿದ್ದಂತಹಾ ನಯನಾನಂದಕರಳಾದ ಲತೆಯಂತಿದ್ದ ಆ ಸಖಿಯನ್ನು ನೋಡಿ ಋಷ್ಯಶೃಂಗನಿಗೆ ಮೊದಲ ಬಾರಿಗೆ ಭಯವೂ ಆಶ್ಚರ್ಯವೂ ಉಂಟಾಯಿತು. ಹಾಗೆಯೇ ಸ್ವಲ್ಪ ಹೊತ್ತು ಅವಳನ್ನೇ ನೋಡುತ್ತಿದ್ದ ಋಷ್ಯಶೃಂಗನು ತಮ್ಮ ಆಶ್ರಮಕ್ಕೆ ಬಂದಿರುವವರು ಪುರಾಣೋಕ್ತರಾದ ಯಕ್ಷರೋಗಂಧರ್ವರೋ ಇರಬೇಕೆಂದರಿತು ಸಾಷ್ಟಾಂಗ ಪ್ರಣಾಮ ಮಾಡಲೆತ್ನಿಸಿದಾಗ ಆ ಸಖಿಯು "ಪೂಜ್ಯಮಹರ್ಷಿಗಳೇ, ನಿಮ್ಮಿಂದ ಪ್ರಣಾಮಗಳನ್ನು ಸ್ವೀಕರಿಸುವಷ್ಟು ಅರ್ಹತೆ ಎನಗಿಲ್ಲ" ಎಂದು ಮಧುರವಾಗಿ ಹೇಳಿದಳು, ಮತ್ತು ಕುಶಲ ಪ್ರಶ್ನೆಗಳನ್ನು ಮಾಡಿದಳು. ಆವಳ ಮಧುರವಾದ ಮಾತನ್ನು ಕೇಳಿದ ಋಷ್ಯಶೃಂಗನಿಗೆ ಅಮಿತಾನಂದವಾಯಿತು. ಹಾಗೂ ಅವಳ ಮೇಲೆ ಮೇಲೆ ಏನೋ ಒಂದು ತರಹ ವ್ಯಾಮೋಹ ಹುಟ್ಟಿತು.

ಆ ಸಖಿಯು ಮತ್ತೆ ಮುಂದುವರಿಸುತ್ತಾ "ಎಲೈ ಮುನಿವರ್ಯಾ, ನಾನೂ ನಿಮ್ಮಂತೆಯೇ ಒಬ್ಬ ಬ್ರಹ್ಮಚಾರಿ. ನನ್ನ ಆಶ್ರಮ ಇಲ್ಲೇ ಹತ್ತಿರದಲ್ಲೇ ಇದೆ. ಒಂದು ಸಲ ಭೇಟಿ ಕೊಡಬಹುದಲ್ಲಾ" ಎಂದು ವಿನಯದಿಂದ ಕೇಳಿಕೊಂಡಳು. ಅವಳ ಸಹವಾಸವನ್ನು ಮನಸಾರೆ ಮೆಚ್ಚಿದ ಋಷ್ಯಶೃಂಗನಿಗೆ, ಅವಳೊಡನೆ ಅವಳ ಆಶ್ರಮಕ್ಕೆ ಹೋಗಿ ಅಲ್ಲಿಯ ರೀತಿ ನೀತಿಗಳನ್ನು ನೋಡಬೇಕೆಂದು ಮನಸ್ಸಾಯಿತು.

ಆದರೂ ತಂದೆಯ ಅಭಿಪ್ರಾಯವಿಲ್ಲದೆ ಯಾವ ಕಾರ್ಯವನ್ನೂ ಮಾಡಲೊಲ್ಲದ ಋಷ್ಯಶೃಂಗನು ಮರುದಿನ ಅವಳ ಆಶ್ರಮಕ್ಕೆ ಬರುವುದಾಗಿ ಹೇಳಿದನು. ಹೊರಡುವಾಗ ಆ ಹಸನ್ಮುಖಿಯಾದ ಸಖಿಯು ತಮ್ಮ ಆಶ್ರಮದಲ್ಲೆಲ್ಲಾ ಹೀಗೆಯೇ ಜನರು ಅಭಿನಂದಿಸುವುದೆಂದು ಹೇಳುತ್ತಾ ಋಷ್ಯಶೃಂಗನನ್ನು ಮೃದುವಾಗಿ ಆಲಿಂಗನ ಮಾಡಿಕೊಂಡಳು. ಆಮೇಲೆ ಅವಳು ಎದ್ದು ನಿಂತು ಋಷ್ಯಶೃಂಗರಿಗೆ ಮರುದಿನ ತಪ್ಪದೆ ತನ್ನ ಆಶ್ರಮಕ್ಕೆ ಬರಬೇಕೆಂದು ಹೇಳಿ ಹೊರಟಳು ತನ್ನ ಆ ಕೃತಕ ಆಶ್ರಮಕ್ಕೆ (ತೆಪ್ಪದಮೇಲೆ) ನಗುತ್ತಾ ಹಿಂದಿರುಗಿದಳು.

ಮಿಂಚಿನಂತೆ ಬಂದು ತಮ್ಮ ಮನಸ್ಸಿನ ಮೇಲೆ ಅಷ್ಟೊಂದು ಪರಿಣಾಮವನ್ನು ಬೀರಿದ ಆ ಸಖಿಯನ್ನೇ ಹಾಗೂ ಅವಳ ಸಹವಾಸನ್ನೇ ಯೋಚಿಸುತ್ತಾ ಋಷ್ಯಶೃಂಗನು ಕುಳಿತು ಬಿಟ್ಟನು. ಅಂದಿನ ಆಶ್ರಮದ ಕಾರ್ಯಕಲಾಪಗಳನ್ನು ಮರೆತೇ ಬಿಟ್ಟ.

ಸಂಜೆಯ ವೇಳೆಗೆ ಗೆಡ್ಡೆಗೆಣಸುಗಳನ್ನು ಶೇಖರಿಸಿಕೊಂಡುವಿಭಾಂಡಕರು ಆಶ್ರಮಕ್ಕೆ ಹಿಂದಿರುಗಿದಾಗ ಆಶ್ರಮವು ಎಂದಿನಂತಿಲ್ಲದಿದ್ದುದನ್ನು ಕಂಡು ಆಶ್ಚರ್ಯಚಕಿತರಾದರು. ಆಶ್ರಮದ ನಿತ್ಯಕರ್ಮಗಳನ್ನೂ ಪೂರ್ಣವಾಗಿ ಮಾಡದೇ ಕುಳಿತಿದ್ದ ತಮ್ಮ ಮಗನ ಮೇಲೆ ಅವರಿಗೆ ಎಲ್ಲಿಲ್ಲದ ಕೋಪಬಂದಿತು. ಕಿಡಿಕಾರುತ್ತಿರುವ ಕಣ್ಣುಗಳಿಂದ ಋಷ್ಯಶೃಂಗನನ್ನು ಆಶ್ರಮಕಾರ್ಯಗಳ ಅಪೂರ್ಣತೆಗಾಗಿ ಕಾರಣ ಕೇಳಿದಾಗ ಗಾಢ ಯೋಚನೆಯಿಂದೆಚ್ಚೆತ್ತು ಅವನು ಸ್ವಲ್ಪ ತಾಸುಗಳ ಹಿಂದೆ ನಡೆದ ಘಟನೆಯನ್ನು ವಿವರಿಸುತ್ತಾ "ಪೂಜ್ಯ ಪಿತೃವರ್ಯ ನಮ್ಮ ಆಶ್ರಮಕ್ಕೆ ಬಂದಿದ್ದ ಆ ಬ್ರಹ್ಮಚಾರಿಯ ಮೇಲೆ ನನಗೆ ಎಲ್ಲಿಲ್ಲದ ವ್ಯಾಮೋಹ ಹುಟ್ಟಿ ಕೊಂಡುಬಿಟ್ಟಿದೆ. ಅವನ ಆಶ್ರಮವು ಇಲ್ಲೆ ಹತ್ತಿರದಲ್ಲಿ ಇದೆಯಂತೆ. ಹೋಗಲು ಅನುಮತಿ ಕೊಡಿ ಎಂದು ಬೇಡಿದ. ಮರುಕ್ಷಣವಲ್ಲಿಯೇ ತಮ್ಮ ಜ್ಞಾನ ದೃಷ್ಟಿಯಿಂದ ವಿಭಾಂಡಕರು ನಡೆದ ನಿಜವಾದ ಸಂಗತಿಯನ್ನೆಲ್ಲಾ ಅರಿತರು. ಅವರು ಋಷ್ಯಶೃಂಗನೊಡನೆ ಕೋಪರಹಿತರಾಗಿ "ಎಲೈ ಮಗುವೇ ನಿನ್ನೊಡನೆ ಮಾತನಾಡಿದ ಆ ಬ್ರಹ್ಮಚಾರಿಯು ನಿಜವಾದ ಬ್ರಹ್ಮಚಾರಿಯಲ್ಲ. ಅದೊಂದು ಮಾಯಾರೂಪಿಯಾದ ರಾಕ್ಷಸ. ಇನ್ನೆಂದೂ ನೀನು ಅದರ ಸಹವಾಸವನ್ನು ಬಯಸಿ ಹೋಗಬೇಡ" ಎಂದು ಅವನನ್ನು

ಪ್ರಪಂಚ ಬಂಧನದಿಂದ ದೂರವಿಡಲು ಪ್ರಯತ್ನಿಸಿದರು. ಆದರೆ ದೈವಸಂಕಲ್ಪ ತನ್ನ ದಾರಿ ತಪ್ಪುವುದೆ? ಋಷ್ಯಶೃಂಗನು ಅಂದಿನ ಕಾರ್ಯಗಳನ್ನೆಲ್ಲಾ ಮರೆತು ಆ ಸಖಿಯ ನಡವಳಿಕೆಯ ಬಗ್ಗೆಯೆ ಯೋಚಿಸುತ್ತಾ ಕುಳಿತನು. ತಮ್ಮ ಮಗನ ಮನಸ್ಸಿನ ತೀವ್ರ ಪರಿಣಾಮಕ್ಕೆ ಕಾರಣರಾದ ಆ ನಾರಿಯರ ಮೇಲೆ ವಿಭಾಂಡಕರಿಗೆ ಅತ್ಯಂತ ಕೋಪ ಬಂದಿತು. ಆದರೆ ಶಾಪ ಕೊಡುವುದರಿಂದ ತಾವು ಮಾಡಿದ ಯಜ್ಞಯಾಗಾದಿ ಫಲಗಳೆಲ್ಲಾ ಹೋಗುವುದೆಂದೆಣಿಸಿ ಅವರು ಸುಮ್ಮನಿದ್ದರು.

ಮರುದಿನ, ನಿತ್ಯದಂತೆ ಸ್ನಾನ ಸಂಧ್ಯಾವಂದನೆಗಳನ್ನೆಲ್ಲಾ ಮುಗಿಸಿ ವಿಭಾಂಡಕರು ಹಣ್ಣುಗಳನ್ನು ಶೇಖರಿಸಿ ತರಲು ಹೊರಟು ಹೋದರು. ಈ ಸಮಯವನ್ನೇ ಕಾಯುತ್ತಿದ್ದ ಆ ಸಖಿಯು ಮೆಲ್ಲಗೆ ಹೆಜ್ಜೆಯಿಡುತ್ತಾ ಋಷ್ಯಶೃಂಗನ ಆಶ್ರಮದ ಮುಂದೆ ತೆರಳಿದಳು.

ಅವಳ ಯೋಚನೆಯಲ್ಲಿ ನಿರತನಾಗಿದ್ದ ಋಷ್ಯಶೃಂಗನು ಅವಳನ್ನು ಕಂಡೊಡನೆಯೆ ಹರ್ಷದಿಂದ ಕೂಗುತ್ತಾ ಜಿಗಿಯುತ್ತಾ ಆಶ್ರಮದಿಂದ ಹೊರಗೆ ಓಡಿ ಬಂದನು. ಅವಳು ಅವನನ್ನು ಕರಿತು "ಋಷಿವರ್ಯ, ನನ್ನ ಆಶ್ರಮಕ್ಕೆ ಬರಲು ಅಣಿಯಾಗಿರುವೆಯಾ" ಎಂದು ಮೃದುವಾಗಿ ಕೇಳಿದಳು. ಆ ಪ್ರಶ್ನೆಯನ್ನು ಮೊದಲೇ ನಿರೀಕ್ಷಿಸಿದ್ದ ಋಷ್ಯಶೃಂಗನು ತಲೆಯಾಡಿಸುತ್ತಾ ಬರಲು ಒಪ್ಪಿದನು.

ಇಬ್ಬರೂ ಆ (ತೆಪ್ಪದಮೇಲಿದ್ದ) ಆಶ್ರಮದ ಕಡೆಗೆ ನಡೆದರು. ಅವಳು ಮೊದಲು ಆ ಆಶ್ರಮದ ಮೆಟ್ಟಿಲುಗಳನ್ನು ಹತ್ತಿ ಋಷ್ಯಶೃಂಗನನ್ನು ಸ್ವಾಗತಿಸಿದಳು. ಋಷ್ಯಶೃಂಗನು ದೈವೀಸಂಕಲ್ಪಾಂಧನಾಗಿ ಹಸನ್ಮುಖದಿಂದ ಆಶ್ರಮದ ಒಳಗೆ ನಡೆದನು. ಅವನು ಒಳಗೆ ಹೋದ ಮರುಕ್ಷಣದಲ್ಲಿಯೇ ಮಿಕ್ಕ, ಅವಿತುಕೊಂಡಿದ್ದ ತರುಣಿಯರು ತೆಪ್ಪವನ್ನು ಕಟ್ಟಿಹಾಕಿದ್ದ ಹಗ್ಗವನ್ನು ಬಿಚ್ಚಿದರು. ತಕ್ಷಣವೇ ಆ ದ್ವೀಪವನ್ನು ಹೋಲುವ ತೆಪ್ಪವು ನಿಧಾನವಾಗಿ ನದಿಯ ಮಾರ್ಗದಲ್ಲಿ ಅಂಗ ದೇಶದ ಕಡೆಗೆ ಸಾಗಿತು. ನಿಜವಾದ ಆಶ್ರಮವನ್ನೆ ಹೋಲುವ ಆ ಕೃತಕ ಆಶ್ರಮದಲ್ಲಿದ್ದ ಋಷ್ಯಶೃಂಗನಿಗೆ ಇದಾವುದೂ ಗೊತ್ತಾಗಲೇ ಇಲ್ಲ.

ಕೆಲವು ತಾಸುಗಳ ನಂತರ ಆ ತೆಪ್ಪವು ಅಂಗದೇಶವನ್ನು ಮುಟ್ಟಿತು. ಋಷ್ಯಶೃಂಗ ಮುನಿಯನ್ನು ಸ್ವಾಗತಿಸಲು ರಾಜ ರೋಮಪಾದ, ಅವನ ಆಸ್ಥಾನದ ಅಮಾತ್ಯರು, ಬ್ರಾಹ್ಮಣರು, ಹಾಗೂ ಊರಿನ ಪ್ರಜೆಗಳೆಲ್ಲರೂ ಸಾಲಾಗಿ ನಿಂತಿದ್ದರು. ಕೃತಕ ಆಶ್ರಮದೊಳಗಿದ್ದ ಋಷ್ಯಶೃಂಗನನ್ನು ಆ ಸಖಿಯು ಹೊರಗೆ ಬರಲು ಕೇಳಿಕೊಂಡಳು. ಹೊರಗೆ ಬಂದಾಗ ಆ ಭಾರಿ ಜನಸ್ತೋಮವನ್ನು ಕಂಡು ಋಷ್ಯಶೃಂಗನು ದಿಗ್ಭ್ರಾಂತಿಗೊಂಡು ಆಶ್ಚರ್ಯದಿಂದ ನೋಡಿದನು. ಆಗ ರಾಜ ರೋಮಪಾದನು ಅವನನ್ನು ಕರೆಸಿದ ಉದ್ದೇಶವನ್ನೆಲ್ಲಾ ತಿಳಿಸಿದನು. ತಮ್ಮ ಜ್ಞಾನದೃಷ್ಟಿಯಿಂದ ಆಗ ಋಷ್ಯಶೃಂಗನು ತಮ್ಮ ತಂದೆಯ ಧ್ಯೇಯವನ್ನೂ ಹಾಗೂ ತನ್ನಂತೆಯೇ ಅನೇಕ ಜೀವಗಳಿರುವರೆಂಬುದೆಲ್ಲವನ್ನೂ ತಿಳಿದುಕೊಂಡನು. ಮೆಲ್ಲಗೆ ಆ ತೆಪ್ಪದಿಂದಿಳಿದು ಅಂಗದೇಶದ ನೆಲದ ಮೇಲೆ ಕಾಲಿಟ್ಟ ಕ್ಷಣದಿಂದಲೇ ಧಾರಾಕಾರವಾಗಿ, ಬ್ರಾಹ್ಮಣರು ಹೇಳಿದ್ದಂತೆಯೇ ಮಳೆಯಾಯಿತು. ಎಲ್ಲೆಲ್ಲಿಯೂ ಸುಭಿಕ್ಷ ಉಂಟಾಯಿತು ರಾಜ ರೋಮಪಾದನು ಋಷ್ಯಶೃಂಗನನ್ನು ತನ್ನ ಅರಮನೆಗೆ ಕರೆದುಕೊಂಡು ಹೋಗಿ ಸಾಂಗವಾಗಿ ಉಪಚರಿಸಿದನು. ಇವೆಲ್ಲವೂ ಆದಮೇಲೆ ರಾಜನು ತನ್ನ ಒಬ್ಬಳೇ ಮಗಳಾದ, ಹಾಗೂ ಸೌಂದರ್ಯದಲ್ಲಿ ಎಲ್ಲರನ್ನೂ ಮೀರಿಸಿದ್ದ, ಶಂತಳನ್ನು ಋಷ್ಯಶೃಂಗನಿಗೆ ಕೊಟ್ಟು ಮದುವೆಮಾಡಿದನು, ಹಾಗೂ ತನ್ನ ರಾಜ್ಯದಲ್ಲಿ ಅರ್ಧರಾಜ್ಯವನ್ನೂ ಕೊಟ್ಟನು. ಇವೆಲ್ಲವೂ ಋಷ್ಯಶೃಂಗನಿಗೆ ಹೊಸದಾದ್ದರಿಂದ ಕುತೂಹಲದಿಂದ ಎಲ್ಲವನ್ನೂ ನೋಡುತ್ತಿದ್ದನು.

ಪ್ರಜೆಗಳಿಗೆಲ್ಲರಿಗೂ ಕ್ಷೇಮ ಉಂಟಾಯಿತೆಂಬ ಸುಸುದ್ದಿಯ ರೋಮಪಾದನನ್ನು ಸಂತೋಷಗೊಳಿಸಿತಾದರೂ, ಪುತ್ರನನ್ನು ಹುಡುಕುತ್ತಾ ವಿಭಾಂಡಕರು ಬಂದೇ ಬರುವರೆಂದೂ ತನ್ನ ಶಾಪಕೊಡಲೂಬಹುದೆಂದು ಮೊದಲೇ ಯೋಚಿಸಿದ್ದನು. ಕೋಪದಿಂದ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಬರುವ ವಿಭಾಂಡಕರನ್ನು ಶಾಂತಗೊಳಿಸಲು ಏನೇನು ಕೆಲಸಕಾರ್ಯಗಳನ್ನು ಮಾಡಬೇಕೋ ಅದೆಲ್ಲವನ್ನೂ ಮಾಡಿದನು. ಪ್ರಜೆಗಳೆಲ್ಲರಿಗೂ ವಿಭಾಂಡಕರು ಬಂದಾಗ ಋಷ್ಯಶೃಂಗನನ್ನು ಹೊಗಳುವಂತೆ ಹೇಳಿದನು.

ಇತ್ತ ಹಣ್ಣು ಬೇರುಗಳನ್ನು ಶೇಖರಿಸಿ ಆಶ್ರಮಕ್ಕೆ ಹಿಂತಿರುಗಿದ ವಿಭಾಂಡಕರು ಆಶ್ರಮದಲ್ಲಿ ತಮ್ಮ ಮಗನಿಲ್ಲದಿದ್ದುದನ್ನು ಕಂಡು ಅತ್ಯಂತ ಆಶ್ಚರ್ಯಚಕಿತರಾಗಿ ಕೋಪಾಗ್ನಿಯಿಂದ ತಮ್ಮ ಕೆಂಪಾದ ಕಣ್ಣುಗಳನ್ನು ಸುತ್ತಲೂ ಹೊರಳಿಸಿದರು. ಹಿಂದಿನ ದಿನದ ದೃಷ್ಟಾಂತವುಂಟುಮಾಡಿದ್ದ ತಮ್ಮ ಮಗನ ಮೇಲಿನ ಪರಿಣಾಮವನ್ನೂ ಜ್ಞಾಪಿಸಿಕೊಂಡರು. ಒಂದು ನಿಮಿಷ ಕಣ್ಣು ಮುಚ್ಚಿ ಯೋಚಿಸಿದಾಗ ಅವರಿಗೆ ನಡೆದ ಸಂಗತಿಯೆಲ್ಲ ತಿಳಿದು ಹೋಯಿತು. ಹೇಗಿದ್ದರೋ ಹಾಗೆಯೇ ಅಂಗದೇಶದ ಕಡೆಗೆ ನಡೆದರು. ನದಿಯನ್ನು ದಾಟಿ ಅಂಗದೇಶವನ್ನು ತಲುಪಿದರು.

ಅವರು ರಾಜಧಾನಿಯತ್ತ ನಡೆವಾಗ ಎಲ್ಲೆಲ್ಲಿಯೂ ತಮ್ಮ ಮಗನನ್ನು ಹೊಗಳುವ ಮಾತೇ ಕೇಳಿಸುತ್ತಿತ್ತು. ಗೊಲ್ಲರೆಲ್ಲರೂ, ತಮ್ಮ ಅಸಂಖ್ಯಾತ ಹಸುಗಳೆಲ್ಲವೂ ಋಷ್ಯಶೃಂಗರದೆ ಎಂದು ಹೇಳುತ್ತಿದ್ದರು. ಶೂದ್ರರೆಲ್ಲರೂ ತಾವು ಬೆಳೆಯುವ ಭೂಮಿಯೆಲ್ಲಾ ಋಷ್ಯಶೃಂಗರದೆ ಎಂದು ಹೇಳುತ್ತಿದ್ದರು. ಎಲ್ಲೆಲ್ಲಿಯೂ ಋಷ್ಯಶೃಂಗರಿಗೆ ಜಯಕಾರವಾಗುತ್ತಿತ್ತು. ಇವೆಲ್ಲವುಗಳಿಂದ ವಿಭಾಂಡಕರ ಕೋಪ ಸ್ವಲ್ಪ ಶಾಂತವಾಯಿತು.

ಅವರು ಬಿರಬಿರನೆ ರೋಮಪಾದರಾಜನ ಅರಮನೆಗೆ ಹೋದರು. ರಾಜಾ ರೋಮಪಾದನು ಅವರನ್ನು ಹೃತ್ಪೂರ್ವಕ ಸ್ವಾಗತಿಸಿದನು. ಅವರನ್ನು ಆಸ್ಥಾನಕ್ಕೆ ಕರೆದೊಯ್ದಾಗ, ಶ್ರೀವಿಯಿಂದ ಶಂತ ರಾಜಕುಮಾರಿಯೊಡನೆ ಸಿಂಹಾಸನದಲ್ಲಿ ವಿರಾಜಮಾನನಾಗಿ ಕುಳಿತಿದ್ದ ಋಷ್ಯಶೃಂಗನನ್ನು ನೋಡಿದ ವಿಭಾಂಡಕರಿಗೆ ಒಂದು ಕಡೆ ತಮ್ಮ ಧೈರ್ಯಕ್ಕೆ ಧಕ್ಕೆಯೊದಗಿದುದನ್ನು ಕಂಡು ದುಃಖವಾದರೆ, ತಮ್ಮ ಮಗನ ಸ್ಥಿತಿಯಿಂದ ಸಂತೋಷವಾಯಿತು.

ತಂದೆಯನ್ನು ಕಂಡೊಡನೆಯೆ ಋಷ್ಯಶೃಂಗನು ಶಂತಳೊಡನೆ ಸಿಂಹಾಸನದಿಂದ ಕೆಳಗಿಳಿದು ನಮಸ್ಕರಿಸಿದನು. ವಿಭಾಂಡಕರು ಹರ್ಷಾಶ್ರುವಿನಿಂದ ತುಂಬಿದ ಕಣ್ಣಿಂದ ಅವರಿಬ್ಬರನ್ನೂ ಹರಸಿ "ಎಲೈ ಋಷ್ಯಶೃಂಗನೆ! ನೀನು ನಿನ್ನ ಮಡದಿಯೊಂದಿಗೆ ಸುಖವಾಗಿರು. ಆದರೆ ಒಂದು ಮಗುವಾದ ತಕ್ಷಣವೇ ಕಾಡಿಗೆ ಬಂದು ಎನ್ನೊಡನೆ ಯಜ್ಞಯಾಗಾದಿಗಳಲ್ಲಿ ತೊಡಗು''ಎಂದರು. ಋಷ್ಯಶೃಂಗನು ಹಸನ್ಮುಖದಿಂದ ಸಮ್ಮತಿಸಿದನು. ರಾಜರೋಮಪಾದನಿಗೆ ವಿದಾಯ ಹೇಳಿ ವಿಭಾಂಡಕರು ತಮ್ಮ ಆಶ್ರಮಕ್ಕೆ ಹಿಂತಿರುಗಿದರು.

ಋಷ್ಯಶೃಂಗನು ಶಂತಳೊಡನೆ ರೋಮಪಾದನ ಅರಮನೆಯಲ್ಲಿ ಸುಖವಾಗಿದ್ದನು. ಪುತ್ರಜನನವಾದ ಕೂಡಲೆ ತನ್ನ ತಂದೆಯ ಬಳಿಗೆ ಹೊರಟು ಹೋದನು. ಈ ರೀತಿ ಮಹಾಮಹಿಮನಾದ ಋಷ್ಯಶೃಂಗನಿಂದ ಅಂಗದೇಶದಲ್ಲಿ ಸುಭಿಕ್ಷ ಉಂಟಾಯಿತು.

★

#  ಗೃಹಲಕ್ಷ್ಮಿ 

# ಸ್ವರ್ಣಗೌರೀ ವ್ರತ

— ಬಿ. ಎಸ್. ಸರೋಜ

ಭಾರತೀಯ ಸಂಸ್ಕೃತಿಯಲ್ಲಿ ವ್ರತಗಳು ಷ್ಟ ಸ್ಥಾನ ಪಡೆದಿವೆ. ವರ್ಷದ ಕೆಲವು ಷ್ಟ ದಿನಗಳಲ್ಲಿ ಆಚರಿಸುವ ಧಾರ್ಮಿಕ ವ್ರತ ಎನಿಸಿಕೊಂಡಿದೆ. ನೇಮನಿಷ್ಠೆ ಂದೊಡಗೂಡಿ ಶಾಸ್ತ್ರೋಕ್ತವಿಧಾನದಂತೆ ರುಮುಖದಿಂದ ವ್ರತಾಚರಣೆ ಮಾಡಿದರೆ ಪರಸುಖ ಪ್ರಾಪ್ತವಾಗುತ್ತದೆಂಬ ಬಿಕೆಯಿದೆ. ವ್ರತಾಚರಣೆ ಮಾಡುವಲ್ಲಿ ಗಸರ ಪಾತ್ರ ಪ್ರಮುಖವಾದದ್ದು. ಪತಿಗಳು ಆಚರಿಸುವ ವ್ರತಗಳು ಕೆಲ ವರೆ, ಹೆಂಗಸರು ಮಾತ್ರ ಮಾಡುವ ತಗಳು ಹಲವು, ಸೌಮಂಗಲ್ಯ ಪ್ರಾಪ್ತಿ ಗಿ ಹೆಂಗಸರು ಆಚರಿಸುವ ವ್ರತಗಳಲ್ಲಿ ಮುಖವಾದದ್ದು ಮಾಂಗಲ್ಯಾಧಿದೇವತೆ ಾದ ಗೌರೀವ್ರತ. 'ಸ್ವರ್ಣಗೌರೀ', ೌನಗೌರಿ', 'ಮಾಘದಗೌರಿ', 'ನಿತ್ಯ ರಿ', 'ಚೈತ್ರಗೌರಿ', 'ಗಜಗೌರಿ', 'ದಿವಶೀ ರಿ' ಮುಂತಾಗಿ ಅನೇಕ ಪ್ರಕಾರಗಳಿಂದ ರೀವ್ರತವನ್ನು ಆಚರಿಸುತ್ತಾರೆ. ಇವು ಲ್ಲಿ 'ಸ್ವರ್ಣಗೌರೀವ್ರತ'ಮುಖ್ಯವಾಗಿದ್ದು, ವನ್ನು ವ್ಯಾಪಕವಾಗಿ ಆಚರಿಸುವುದು ಡುಬರುತ್ತದೆ. 'ದೊಡ್ಡಗೌರೀವ್ರತ' ಬ ಹೆಸರನ್ನೂ ಪಡೆದಿರುವ ಸ್ವರ್ಣಗೌರೀ ತದಂದು ಹೆಂಗೆಳೆಯರು ಮಿಂದು ಮಡಿ ಟ್ಟು, ವ್ರತಾಚರಣೆಮಾಡಿ, ಮೊರದ ಗಿನ ಹಿಡಿದುಸಂಭ್ರಮದಿಂದ ಮನೆಮನೆಗ ಡಾಡುವ ದೃಶ್ಯ ನೋಡುವವರ ಕಣ್ಣಿಗೆ ಬ್ಬವನ್ನುಂಟುಮಾಡುತ್ತದೆ. ಭಾದ್ರಪದ ದ್ಧ ತದಿಗೆಯಂದು ಹೆಣ್ಣುಮಕ್ಕಳು ರ್ಣಗೌರೀವ್ರತ' ವನ್ನು ನೇಮನಿಷ್ಠೆ ಂದ ಆಚರಿಸಿ, 'ಮಾಂಗಲ್ಯಭಾಗ್ಯ' ಶತ್ತು ರಕ್ಷಿಸುವಂತೆ ದೇವಿಯಲ್ಲಿ ಪ್ರಾರ್ಥಿ ತ್ತಾರೆ. ಕೈಲಾಸದಲ್ಲಿ ಶಂಕರನ ಅರ್ಧಾಂಗಿ ಾದ ಗೌರಿ ಭಕ್ತರ ಕರೆಯ ಮೇರೆ ದಿಗೆಯಂದು ಭೂಲೋಕಕ್ಕೆ ಬರುವ ಬ ನಂಬಿಕೆಯಿದೆ. ಪತಿಗೃಹದಿಂದ ಬರುವ ಗೌರಿಯನ್ನು ಸ್ವಾಗತಿಸಿ, ಷೋಡಶೋಪಚಾರಗಳಿಂದ ಪೂಜಿಸಿ, ಸಂತೃಪ್ತಿ ಪಡಿಸುವರು. ಭಕ್ತರಿಂದ ಆತ್ಮೀಯ ಸತ್ಕಾರ ಪಡೆಯಲು ಗೌರಿಗೂ ಆಸೆ. ಅವರ ಆತಿಥ್ಯದಲ್ಲಿ ತವರಿನ ಕಂಪನ್ನು ಕಾಣುವ ಪಾರ್ವತಿ ಭೂಲೋಕಕ್ಕೆ ಹೋಗಿಬರುವುದಕ್ಕಾಗಿ ಶಿವನ ಅಪ್ಪಣೆ ಬೇಡುತ್ತಾಳೆ.

"ಹರನು ಪಾರ್ವತಿದೇವಿ ಪರಮ
ಸಂತೋಷದಲಿ
ಸರಸವಾಡುತ ತನ್ನ ಅರಸರೊಡನೆ |
ವರಭಾದ್ರಪದ ಶುದ್ಧ ತದಿಗೆ ನಾಳೇ
ದಿವ್ಸ
ಅರಸರೇ ತೌರುಮನೆಗ್ಹೋಗಿ ಬರಲೇ ||"

ಶಿವನಿಗೆ ಪಾರ್ವತಿಯನ್ನಗಲಿರಲು ಇಷ್ಟವಿಲ್ಲ. ಆದರೆ ಭಕ್ತರ ಮನೆಯನ್ನು ಬೆಳಗಲು ಹೊರಟಿರುವ ಆಕೆಯನ್ನು ತಡೆಯಲು ಮನ ಒಪ್ಪದು. ಆದ್ದರಿಂದ ಒಪ್ಪುತ್ತಾನೆ.

ಪತಿಯ ಅಪ್ಪಣೆ ಪಡೆದ ಗೌರಿ ಸಂಭ್ರಮದಿಂದ ಧರೆಗಿಳಿಯುತ್ತಾಳೆ. ಆಕೆಯನ್ನು ಸ್ವಾಗತಿಸಲು ಇಳೆಯಲ್ಲಿ ಸಕಲ ಸಿದ್ಧತೆಗಳು ನಡೆಯುತ್ತವೆ. ಮನೆಗೆ ಸುಣ್ಣ ಬಳಿದು, ಸಾರಿಸಿ, ವಿಧವಿಧವಾದ ರಂಗವಲ್ಲಿಗಳನ್ನಿಟ್ಟು ಶೃಂಗರಿಸುತ್ತಾರೆ. ತಳಿರು ತೋರಣಗಳಿಂದ ಸಾಲಂಕೃತವಾದ ಮಂಟಪದಲ್ಲಿ ಹಸೆಮಣೆಯನ್ನಿರಿಸಿ, ರಂಗವಲ್ಲಿಯನ್ನಿಟ್ಟು, ಅದರ ಮೇಲೆ ಒಂದು ಅಗ್ರದ ಬಾಳೆ ಎಲೆ ಅಥವಾ ಹರಿವಾಣವನ್ನಿರಿಸುತ್ತಾರೆ. ಅದರಲ್ಲಿ ಅಕ್ಕಿಯನ್ನು ಹರವಿ, ಅದರ ಮೇಲೆ ಕಲಶ ಪ್ರತಿಷ್ಠೆ ಮಾಡುತ್ತಾರೆ. ಒಂದು ಶುಭ್ರವಾದ ಬೆಳ್ಳಿಯ ಚೊಂಬನ್ನು ಕಲಶವನ್ನಾಗಿ ಮಾಡುತ್ತಾರೆ. ಅದನ್ನು ಸುಣ್ಣ, ಕೆಮ್ಮಣ್ಣು ಪಟ್ಟೆಗಳಿಂದ ಶೃಂಗರಿಸಿ, ಅದರಲ್ಲಿ ಗಂಗಾಜಲವನ್ನು ತುಂಬುತ್ತಾರೆ. ಕಲಶದೊಳಗೆ ಚಿನ್ನ ಅಥವಾ ನಾಣ್ಯವೊಂದನ್ನಿರಿಸುತ್ತಾರೆ. ಕಲಶದ ಬಾಯಿಗೆ ಎರಡು ಅಥವಾ ಐದು ವೀಳ್ಯದೆಲೆಗಳನ್ನು ಸಿಕ್ಕಿಸಿ, ಅದರ ಮೇಲೆ ಅರಿಶಿನ ಹಚ್ಚಿದ ತೆಂಗಿನಕಾಯಿಯನ್ನಿರಿಸುತ್ತಾರೆ. ಕಲಶದ ಕುತ್ತಿಗೆಗೆ ಕರಿಮಣಿ ಸರದಲ್ಲಿ ಪೋಣಿಸಿದ ಮಾಂಗಲ್ಯವನ್ನು ಕಟ್ಟುತ್ತಾರೆ. ಶಕ್ತಿಯಿಲ್ಲದವರು ಅರಿಶಿನದ ಕೊನೆಯನ್ನು ಕಟ್ಟುತ್ತಾರೆ. ಕಲಶಕ್ಕೆ ಸೀರೆ ಉಡಿಸಿ, ವಿಧವಿಧವಾದ ಹೂವುಗಳಿಂದ ಶೃಂಗರಿಸುತ್ತಾರೆ. ಹೀಗೆ ಶೃಂಗರಿಸಿದ ಕಲಶದಲ್ಲಿ ಗೌರಿದೇವಿಯನ್ನು ಆವಾಹನೆ ಮಾಡಿ ಪೂಜಿಸುತ್ತಾರೆ.

ಸಾಲಂಕೃತವಾದ ಹಸೆಮಣೆಯನ್ನಲಂಕರಿಸುವಂತೆ ಗೌರಿಯನ್ನು ಹೆಂಗಸರು ಸುಶ್ರಾವ್ಯವಾಗಿ ಹಾಡುತ್ತ ಆಹ್ವಾನಿಸುತ್ತಾರೆ.

" ಬಾ ಬೇಗ ಗೌರಿದೇವಿಯೆ
ಜುಗಿಜುಗಿಸುವೊ ಹಸೆಗೆ ಈಗಲೆ ||ಪ||
ಮಡದಿಯರೆಲ್ಲರು ಸಡಗರದಿಂದಲಿ
ನಡೆಮುಡಿ ಹಾಸುತ ಒಡನಿರಲು "

ಕಲಶದ ಪಕ್ಕದಲ್ಲಿ ಮಣ್ಣಿನಿಂದ ಮಾಡಿರುವ ಗೌರಿ, ಅರಿಶಿನದಿಂದ ಮಾಡಿರುವ ಗೌರಿ ಹಾಗೂ ಗೌರಿಪೆಟ್ಟಿಗೆಗಳನ್ನಿಟ್ಟು ಪೂಜಿಸುವುದೂ ಉಂಟು.

ಮಿಂದು ಮಡಿಯುಟ್ಟು ಹೆಂಗಸರು ಶ್ರದ್ಧಾಭಕ್ತಿಗಳಿಂದ [illegible] [illegible]

ದಂತೆ ಶಾಸ್ತ್ರೋಕ್ತವಾಗಿ ಗೌರಿಯನ್ನು ಪೂಜಿಸುತ್ತಾರೆ. ಲಲಿತಾಸಹಸ್ರನಾಮ ಅಥವಾ ಅಷ್ಟೋತ್ತರದ ದಿವ್ಯಘೋಷ ಮೊಳಗುತ್ತಿರಲು ಅರಿಶಿನ ಕುಂಕುಮವನ್ನು ದೇವಿಗೆ ಧಾರಾಳವಾಗಿ ಅರ್ಚಿಸುತ್ತಾರೆ. ಕುತ್ತಿಗೆಗೆ ಗಂಧ ಹಚ್ಚಿ, ಬಳೆ, ಬಿಚ್ಚೋಲೆಗಳನ್ನು ಹಾಕಿ ಶೃಂಗರಿಸುತ್ತಾರೆ. ಹದಿನಾರು ಎಲೆ, ಹದಿನಾರು ಅಡಕೆ, ಹದಿನಾರು ಫಲಗಳನ್ನು ದೇವಿಗರ್ಪಿಸುತ್ತಾರೆ. ಸ್ವರ್ಣಗೌರೀ ವ್ರತ ಕಥೆಯನ್ನು ಕೇಳಿ, ಹದಿನಾರು ಗಂಟೆರುವ ದಾರವನ್ನು ಬಲಗೈಗೆ ಕಟ್ಟಿಕೊಳ್ಳುತ್ತಾರೆ. ವಿವಿಧ ಭಕ್ಷ್ಯಗಳನ್ನೊಳಗೊಂಡ ನೈವೇದ್ಯವನ್ನು ದೇವಿಗೆ ಸಮರ್ಪಿಸಿ ಮಂಗಳಾರತಿ ಬೆಳಗುತ್ತಾರೆ. ಹೀಗೆ ಗೌರಿಯನ್ನು ಪೂಜಿಸುವಾಗ ಕೆಳಕಂಡ ಹಾಡನ್ನು ಹಾಡುವುದು ರೂಢಿಯಲ್ಲಿದೆ.

"ಪೂಜೆ ಮಾಡುವ ಬನ್ನಿರೇ ಶ್ರೀಗೌರಿಯ
ಪೂಜೆ ಮಾಡುವ ಬನ್ನಿರೇ ||ಪ||

ಪೂಜೆ ಮಾಡುವ ಬನ್ನಿ ಮೂರ್ಜಗ
ಜನನಿಯ
ರಾಜರಾಜೇಶ್ವರಿ ಎನಿಪ ಗೌರಮ್ಮನ
|| ಅ. ಪ ||

ಪಟ್ಟೆ ಬಣ್ಣಗಳನುಟ್ಟು ಭಾಮೆಯರೆಲ್ಲ
ನಿಷ್ಠೆಯಿಂದಲಿ ಬೇಗ ಬನ್ನಿರೆ |
ತಟ್ಟೆಗೆ ಅಣಿಮಾಡಿ ಸಕಲಪದಾರ್ಥವ
ಮುಟ್ಟಿ ಪೂಜಿಸಿ ಇಷ್ಟಾರ್ಥ ಬೇಡುವ
|| ೧ ||

ಧ್ಯಾನ ಆವಾಹನೆಯೂ ಅರ್ಘ್ಯವು
ಪಾದ್ಯ ಆಚಮನವ ಮಾಡಿಸಿ
ಸ್ನಾನ ಶುದ್ಧೋದಕದಿ ಪರಿಮಳ ಪೂಸಿ
ನಾನಾಪರಿಯ ಗಂಗಾಜಲವನೆರೆದು
|| ೨ ||

ಗಂಧ ಅಕ್ಷತೆ ಪುಷ್ಪವು ಗೆಜ್ಜೆ ವಸ್ತ್ರ
ಚಂದದರಿಶಿನ ಕುಂಕುಮ |
ಅಂದದ ಕರಿಮಣಿ ಬಿಚ್ಚೋಲೆ ಬಳೆಯ
ನಿಟ್ಟು
ಮಂದಾರ ಮಲ್ಲಿಗೆ ಮಾಲೆಗಳ ಮುಡಿಸಿ
|| ೩ ||

ಸಾಲುದೀಪಗಳ ಹಚ್ಚಿ ಪುಷ್ಪದಿಂದ
ಚೆಲುವ ಸಾಸಿರ ನಾಮದಿ ಪೂಜಿಸಿ |
ಮೇಲುಪರಿಯ ಧೂಪದಾರತಿಗಳನೆತ್ತಿ
ಪಾಲುಮಾಡಿದ ಕಾಯಿಗಳನರ್ಪಿಸಿ
|| ೪ ||

ಶಾಲ್ಯಾನ್ನವು ಘೃತ ಶಾಕಂಗಳು
ನಾನಾಪರಿಯ ಭಕ್ಷ್ಯವು |
ಮೇಲುಪರಿಯ ಚಿತ್ರಾನ್ನ ಸದ್ಯೋಘೃತ
ನಾರಿಯರೆಲ್ಲರು ನೈವೇದ್ಯವಿಟ್ಟು ೫ ||

ಹಸ್ತಪಾದವ ತೊಳೆದು ಶ್ರೀ ಗೌರಿಗೆ
ವಸ್ತ್ರದಲೊತ್ತಿ ಆಚಮನವಮಾಡಿಸಿ |
ಕತ್ತರಿಸಿದ ಅಡಿಕೆ ಬಿಳಿಯೆಲೆ ಯಾಲಕ್ಕಿ
ಕರ್ಪೂರ ಬೆರೆಸಿ ವೀಳಯವಿತ್ತು || ೬ ||

ಕರ್ಪೂರದಾರತಿಯನೆತ್ತುತಲಾಗ
ಮತ್ತೆ ಪ್ರದಕ್ಷಿಣೆಯ ಮಾಡಿ |
ಅರ್ತಿಯಿಂದ ಪುಷ್ಪಾಂಜಲಿಯಿಟ್ಟು
ಸ್ತುತಿಸುತ
ಭಕ್ತವತ್ಸಲೆಯನು ಬೇಡುತಲಿ || ೭ ||

ಚಿನ್ನದ್ವಾರಿವಾಣದಲಿ ನಾರಿಯರೆಲ್ಲ
ರನ್ನದೋಕುಳಿಯ ಮಾಡಿ
ಚಿನ್ನದ ಸೊಡರಿಟ್ಟು ಘೃತಬತ್ತಿಯ
ಹಾಕಿ
ಸಣ್ಣರಾಗದಿ ಪಾಡುತಲಾರತಿಯೆತ್ತಿ
|| ೮ ||

ಅನಂತರ ಗೌರೀದೇವಿಗೆ ಮೊರದ ಬಾಗಿನವನ್ನು ನೀಡುತ್ತಾರೆ. ಹೊಸಮೊರವೊಂದರಲ್ಲಿ ದಿನನಿತ್ಯ ಅಡಿಗೆಗೆ ಬಳಸುವ ಸಾಮಗ್ರಿಗಳಾದ ಅಕ್ಕಿ, ಗೋಧಿ, ಬೇಳೆಗಳು, ಉಪ್ಪು [illegible] ಮಂಗಳದ್ರವ್ಯಗಳಾದ

ಅಶಿನ, ಕುಂಕುಮ, ಕರಿಮಣಿ, ಬಳೆ, ಸ್ಟಾಲೆಗಳನ್ನೂ, ತಾಂಬೂಲ, ಬೆಲ್ಲ, ಕೆಕಣ್ಣ, ದಕ್ಷಿಣೆ, ಕನ್ನಡಿ, ಹಣಿಗೆ ಇನ್ನಿಟ್ಟು ಅದರ ಮೇಲೆ ಮತ್ತೊಂದು ೂಸಮೊರವನ್ನು ಮುಚ್ಚಿ, ಅದನ್ನು ೌರೀದೇವಿಗೆ ನೀಡಿ, ಸೌಮಂಗಲ್ಯವನ್ನಿತ್ತು ಕ್ಷಿಸುವಂತೆ ಬೇಡುತ್ತಾರೆ. ಗೌರಿಗೆ ಬಾಗಿನ' ವನ್ನು ನೀಡುವ ಸಂದರ್ಭದಲ್ಲಿ ಂಗಸರು ಸುಶ್ರಾವ್ಯವಾಗಿ ಹೀಗೆ ಹಾಡು ತ್ತಾರೆ.

ವಾಯನವ ತೆಗೆದುಕೊಳ್ಳೆ ಗೌರೀ-
ದೇವಿಯೆ ‖ ಪ ‖

ತಾಯೆ ಪತಿದೇವಗೆ ದೀರ್ಘಾಯುಷ್ಯವ
ನೀಡೆ ‖ ಅ. ಪ ‖

ಕರುಣವನ್ನು ಮಾಡು ತಾಯೆ ಭಕ್ತ-
ವತ್ಸಲೆ

ಸೆರಗೊಡ್ಡಿ ಬೇಡುವೆ ನಾನು ವರವ
ದಯಮಾಡೆ ‖ ೧ ‖

ಕುಂಕುಮವ ಅನುದಿನವು ಹಚ್ಚುವಂತೆ
ಪಂಕಜಾಕ್ಷಿ ಕರುಣದಿಂದ ವರವ
ನೀಡೆಲೆ ‖ ೨ ‖

ಮಸ್ತಕದಲ್ಲಿ ಧರಿಸುವಂಥ ಪುಷ್ಪವನ್ನು
ಸ್ವಸ್ಥವಾಗಿ ಮುಡಿಯುವಂಥ ವರವ
ನೀಡೆಲೆ ‖ ೩ ‖

ಅನಂತಾನಂತ ವಂದನೆಯು ಮಾಡಿ
ಬೇಡುವೆ
ಸೌಮಂಗಲ್ಯ ಸೌಭಾಗ್ಯವ ಕೊಟ್ಟು
ರಕ್ಷಿಸೆ ‖ ೪ ‖

ಪೂಜೆಯಾದ ಮೇಲೆ ಮುತ್ತೈದೆಯರಿಗೆ ಫಲತಾಂಬೂಲವನ್ನೂ 'ಮೊರದ ಬಾಗಿನ' ವನ್ನೂ ನೀಡುತ್ತಾರೆ. ಮದುವೆಯಾದ ಮೊದಲ ವರ್ಷ ಹದಿನಾರುಜನ ಮುತ್ತೈದೆಯರಿಗೆ 'ಮೊದಲಬಾಗಿನ' ನೀಡುತ್ತಾರೆ. ಅನಂತರ ಪ್ರತಿವರ್ಷ ವ್ರತಾಚರಣೆ ಮಾಡಿ ಆದಿ, ಅಂತ್ಯ ಅಥವಾ ಮಧ್ಯದಲ್ಲಿ ಉದ್ಯಾಪನ ಮಾಡಿದರೆ ವ್ರತಫಲ ಪ್ರಾಪ್ತವಾಗುತ್ತದೆಂಬ ನಂಬಿಕೆಯಿದೆ.

ಸಜ್ಜನರಿಗೆ ಸಕಲ ಸೌಖ್ಯಗಳನ್ನೀಯುವ ವ್ರತವಾವುದೆಂದು ಷಣ್ಮುಖನು ಪರಶಿವನನ್ನು ಪ್ರಶ್ನಿಸಲು ಶಿವನು ಶ್ರೇಷ್ಠವಾದ ಸ್ವರ್ಣಗೌರೀವ್ರತ ವಿಧಾನವನ್ನರುಹಿದನೆಂಬ ಸಂಗತಿಯನ್ನೊಳಗೊಂಡ 'ಸ್ವರ್ಣಗೌರೀವ್ರತ'ದ ಹಾಡನ್ನು ಅಂದು ಹಾಡುವ ಸಂಪ್ರದಾಯ ಕಂಡುಬರುತ್ತದೆ.

★

---

( ನೇ ಪುಟದಿಂದ )

ಾದ ಪ್ರಾಣಿ. ಹುಟ್ಟಿದ ಮಗು ಬಲವಂತವಾಗಿ ಇರಬೇಕೆಂದು ತಾಯಿ ಅಪೇಕ್ಷಿಸುವುದು ಸಹಜವೇ. ಈ ಅರ್ಥ ಗಜಮುಖ ಮೂರ್ತಿ ಕಲ್ಪನೆಯಲ್ಲಿ ನಿಗೂಢವಾಗಿದೆ. ತನ್ನ ಮಗು ಆರೋಗ್ಯವಂತನಾಗಿ ಇರಬೇಕೆಂದು ತಾಯಿ ಪೌಷ್ಟಿಕಾಹಾರವನ್ನು ನೀಡುತ್ತಾಳೆ. ಆದ್ದರಿಂದ ಗಣೇಶನನ್ನು ಭೋಜನಪ್ರಿಯನಾಗಿ, ಭಕ್ಷ್ಯಪ್ರಿಯನಾಗಿ ಚಿತ್ರೀಕರಿಸಿದ್ದಾರೆ. ಲೋಕದಲ್ಲಿ ಯಾರನ್ನು ನಾವು ಸೋಲಿಸುತ್ತೇವೋ ಅವರನ್ನುನಮ್ಮ ಸೇವಕರನ್ನಾಗಿ ಮಾಡಿಕೊಳ್ಳುತ್ತೇವೆ. ಗಣಪತಿ ಬೆಳೆಗೆ ಅಧಿಪತಿ. ಬೆಳೆಯನ್ನು ನಾಶಮಾಡುವ ಇಲಿಯನ್ನು ಗೆದ್ದು, ತಾನು ಹೇಳಿದಂತೆ ಕೇಳುವಂತೆ ಮಾಡಿದನು ಗಣಪತಿ. ಆದ್ದರಿಂದ ಇಲಿ ಗಣಪತಿಗೆ ವಾಹನವಾಯಿತು. ಗಣಪತಿ ಪೂಜೆಗೆ ಉಪಯುಕ್ತವಾದ ಪತ್ರಿಗಳೆಲ್ಲವೂ ಸಸ್ಯವಿಶೇಷಗಳೇ.

'ಗಣಪತಿ' ಎನ್ನುವ ಪುಸ್ತಕವನ್ನು ಬರೆದ ಶ್ರೀಧರಮೂರ್ತಿ ಅವರು:

"ಗಣ ಎಂದರೆ ಗುಂಪು ಸಂಗಡ, ಸಮೂಹ ಎಂದರ್ಥ. ಪ್ರಾಚೀನ ಭಾರತದ ಮೂಲನಿವಾಸಿಗಳು ಗಣಗಳಾಗಿ, ಗುಂಪು, ಪಂಗಡಗಳಾಗಿ ಬೆಟ್ಟಗಳಲ್ಲಿ, ಜಲವಸತಿಗಳಿದ್ದ ಸ್ಥಳಗಳಲ್ಲಿ ವಾಸಿಸುತ್ತಿದ್ದರು. ಈ ಜನಕ್ಕೆ ಕಾಡುಮೇಡುಗಳಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಲಿದ್ದ ಆನೆಗಳು ಭೀತಿಯನ್ನು ಅಚ್ಚರಿಯನ್ನೂ ಉಂಟುಮಾಡಿರಬೇಕು. ಅವುಗಳ ಗಾತ್ರ, ಅವುಗಳ ಶಕ್ತಿ, ಅವುಗಳ ಗಾಂಭೀರ್ಯ ಹಾಗೂ ವಿನಾಶಕ ಸಾಮರ್ಥ್ಯದಿಂದ ಭೀತಿಗೊಂಡ ಅವರು, ಆ ಆನೆಗಳಿಂದ ತಮಗೆ ತೊಂದರೆ ಆಗದಿರಲೆಂದು ಮತ್ತು ತಮಗೂ ಅಂತಹ ಶಕ್ತಿ ಸಾಮರ್ಥ್ಯಗಳು ಲಭ್ಯವಾಗಲೆಂದು ಆನೆಗಳ ಆಕಾರವೇ ಉಳ್ಳ ರಕ್ಷಣಾ ದೇವತೆಯೊಂದನ್ನು ಆ ರಾ ಧಿ ಸು ತ್ತಿ ದ್ದಿ ರ ಬಹುದು" ಎಂದು ಹೇಳಿದ್ದಾರೆ.

ಭಾರತ ದೇಶದಲ್ಲಿರುವ ಆರು ಮತಗಳಲ್ಲಿ ಗಾಣಾಪತ್ಯ ಒಂದು. ಈ ಮತದವರು 'ಗಣಪತಿ' ಯನ್ನು ಪ್ರಧಾನ ದೈವವಾಗಿ ಪೂಜೆ ಮಾಡುವರು. ಪರಮೇಶ್ವರನ ಸೃಷ್ಟಿಗೆ ಕೂಡ ಗಣಪತಿ ಕಾರಕನೆಂದು ಇವರ ಮತ.

ಗಣಪತಿ ಸಮಸ್ತ ಜೀವರಾಶಿಗಳಿಗೆ ಸುಖ ಶಾಂತಿಗಳನ್ನು ಪ್ರಸಾದ ಮಾಡಲಿ.

ಶರಣು ಸಿದ್ಧಿವಿನಾಯಕ ಶರಣು
ವಿದ್ಯಾಪ್ರದಾಯಕ
ಶರಣು ಪಾರ್ವತಿತನಯ ಮೂರುತಿ
ಶರಣು ಮೂಷಿಕವಾಹನ

ನಿಟಿಲ ನೇತ್ರನ ದೇವಿಸುತನೇ ನಾಗ-
ಭೂಷಣ ಪ್ರಿಯನೆ
ತಟಿಲ್ಲತಾಂಕಿತ ಕೋಮಲಾಂಗನೆ ಕರ್ಣ-
ಕುಂಡಲಧಾರನೆ ‖ ಶರಣು ‖

ಬಟ್ಟ ಮುತ್ತಿನ ಪದಕ ಹಾರನೆ
ಬಾಹುಹಸ್ತ ಚತುಷ್ಟನೆ
ಇಟ್ಟತೊಡುಗೆಯ ಹೇಮಕಂಕಣ ಪಾಶ
ಅಂಕುಶಧಾರನೆ ‖ ಶರಣು ‖

ಕುಕ್ಷಿಮಹಲಂಬೋದರನೆ ಇಕ್ಷುಚಾಪನ
ಗೆಲಿದನೆ
ಪಕ್ಷಿವಾಹನ ಸಿರಿಪುರಂದರ ವಿಠಲನ
ನಿಜದಾಸನೆ ‖ ಶರಣು ‖



( 8 ನೇ ಪುಟದಿಂದ )

ಕಂಡವರ ಕೂಡೆಲ್ಲ ಕಾಳಗವ ಕೊಂಡು
ಭೂಮಂಡಲದೊಳಗೆ ಉದ್ದಂಡನಿವನು
ಅಂಡಜವಾಹನಗೆ ಯೋಗ್ಯವಾದ ಹೆಣ್ಣು
ಕಂಡ ಕಂಡೀ ಹಯವದನರಾಯನಿಗೆ

ಇಲ್ಲಿ ದೇವರಲೀಲೆಗಳನ್ನು ವಿಡಂಬಿಸಿ ತಾವೂ ನಕ್ಕು ಪರಮಾತ್ಮನನ್ನೂ ನಗಿಸಿರುವ ನಿಂದಾ ಸ್ತುತಿ ತುಂಬಾ ಮೋಹಕವಾಗಿದೆ. ಕನಕ ದಾಸರು ಕೀರ್ತನೆಯೊಂದರಲ್ಲಿ "ನಮಗೆಲ್ಲಿ ಮನೆಗಳಯ್ಯ ನಾರಾಯಣ, ಕಮಲ ಬ್ರಹ್ಮಾಂಡಕೋಟಿ ಒಡಲೊಳು ತಾಳಿದ ಇಂಥ ಮಾಧವ ನಿನಗೆ ನೀರೊಳುವಾಸ ವಾಯಿತು'' ಎಂದು ಸಾಕ್ಷಾತ್ ನಾರಾಯಣನನ್ನು ಮೊದಲು ಮಾಡಿ ಹಲವಾರು ದೇವರುಗಳಿಗೆ ಮನೆಯೆ ಇಲ್ಲವೆಂದು ಅಣಕವಾಡಿರುವರು. ದಿವ್ಯಭಕ್ತನು ಭಗವಂತನೊಡನೆ ವಾದ ಮಾಡಿ, ದೋಷ ಹೊರಿಸಲು ಹಿಂದೆಗೆಯುವುದಿಲ್ಲ. ಭಗವಂತನಲ್ಲಿ ಪೂರ್ಣ ನಂಬಿಕೆಯನ್ನಿಟ್ಟು ಬದುಕಿದವರಿಲ್ಲ. ಹೀಗೆಂದು ಮನಸ್ಸಿಗೆ ಬಂದಾಗ ನಂಬಿಕೆ ಕುಸಿದು ಹತಾಶರಾಗಿ "ಆರು ಬದುಕಿದರಯ್ಯ ಹರಿ ನಿನ್ನ ನಂಬಿ. ತೋರು ಜಗದೊಳಗೆ ಒಬ್ಬರನು ಕಾಣೆ'' ಎಂದು ನಿಟ್ಟುಸುರು ಬಿಡುವರು. ಅಷ್ಟೇ ಅಲ್ಲ, "ಕಲಹಬಾರದ ಹಾಗೆ ಕರ್ಣನನ್ನು ಕೊಂದೆ, ಸುಲಭದಲ್ಲಿ ಕೌರವರ ಮನೆಯ ನೀ ಮುರಿದೆ. ನೆಲವ ಬೇಡಲು ಪೋಗಿ ಬಲಿಯ ತಲೆಯ ತುಳಿದೆ. ಮೊಲೆಯ ನುಣಿಸಲು ಬಂದ ಪೂತನಿಯ ಕೊಂದೆ. ಹೀಗೆಲ್ಲ ಅಂದು ತಾಮ್ರಧ್ವಜನ ತಂದೆ, ಭೃಗುಮುನಿ, ನರಕನನ್ನು ನಾಶಮಾಡಿದೆ. ಅವನ ಹೆಣ್ಣುಗಳು ನಿನ್ನವರಾದರು'' ಎಂದು ಉದಾಹರಿಸುತ್ತಾರೆ. ಕಡೆಗೆ, 'ನಿನ್ನ ಹೆಸರು ಹೇಳಿಕೊಂಡು ಬೇಡಿದರೆ ತಿರುಪೆಯ ಕೂಳೂ ಸಿಗದು' ಎನ್ನುತ್ತಾರೆ. ಇಲ್ಲೆಲ್ಲ ಶ್ರೀಹರಿಯ ಅನಂತಶಕ್ತಿ, ಅನಂತ ಮಹಿಮೆ, ಅನಂತ ಲೀಲೆಯ ವರ್ಣನೆಯನ್ನು ಕಾಣಬಹುದು.

ದೇವರ ಅನುಗ್ರಹವನ್ನು ಪಡೆಯುವುದು ಕಷ್ಟದ ಕೆಲಸ. ದೇವರನ್ನು ಒಲಿಸಿಕೊಳ್ಳುವುದಕ್ಕೆ ದಾಸರು ಅಪಾರ ಯಾತನೆಯನ್ನು ಅನುಭವಿಸಿರಬೇಕು. ಆದ್ದರಿಂದ ಪುರಂದರ ದಾಸರು ತಮಗೆ ಒಲಿಯದಿರುವ ದೇವರನ್ನು ಕುರಿತು ಕ್ರಮವಾಗಿ,

ತಾಯಿಗೋಪಿಯಂತೆ ನಿನ್ನ
ಒರಳನೆಳಸಲಿಲ್ಲ
ವಾಲಿಯಂತೆ ನಿನ್ನ ಎದುರು ವಾದಿಸಲಿಲ್ಲ
ಭೃಗುಮುನಿಯಂತೆ ನಿನ್ನ ಎದೆಯ
ತುಳಿಯಲಿಲ್ಲ
ಭೀಷ್ಮನಂತೆ ನಿನ್ನು ಹಣೆಯ ಒಡೆಯಲಿಲ್ಲ
ಕೊಂಕಣಿಗರ ಎಮ್ಮೆಗೆ ಕೊಡತಿಯ
ಮುದ್ದೆಂಬಂತೆ
ಅವರವರೆ ಮುದ್ದು ನಿನಗೆ ಪುರಂದರವಿಠಲ

ಮೇಲಿನ ಉಗಾಭೋಗದಲ್ಲಿ ನುಡಿದಿರುವರು. ಹೀಗೆಯೇ ಗೋಪಾಲದಾಸರೂ ಕೂಡಾ ಎಷ್ಟು ಪರಿಯಾಗಿ ಸ್ವಾಮಿಯನ್ನು ಪಾಡಿದರೂ, ಪೊಗಳಿದರೂ, ಅವನ ಕೃಪೆ ತಮ್ಮ ಮೇಲಾಗದಿರಲು ಕುಪಿತರಾಗಿ ಅವನ ಬಣ್ಣವನ್ನು ಬಯಲಿಗೆಳೆಯುತ್ತಾ,

ಕರೆದ ಮಾತಿಗೆ ನೀನು ಬರುವವನಲ್ಲ
ಉರಗನಂದದ ಗುಣವುಳ್ಳ ಪುರುಷ ನೀನು
ಹರಿಯ ಮಾರ್ಜಾಲನಂದನ ಗುಣದವ
ಗರುಡನಂತಹ ನೀನು ವರಕಪಿಗುಣ-
ವುಳ್ಳವ ನೀನು
ಕರಿಯಂಥವ ನೀನು ಕಪ್ಪೆಯಂತಹವ
ನೀನು
ಪರಿಪೂರ್ಣ ನಿರ್ದೋಷ ಗೋಪಾಲ-
ವಿಠಲ
ಸರಿಬಂದಂತಾಡುವೆ ಸಲಿಗೆಯಿಂದಲಿ
ನಾನು

ಊಳಿಗವನ್ನು ಕೊಂಡು ಫಲ ಕೊಡುವ ಸ್ವಾಮಿಯೆಂದೂ, ಅಪರಾಧವನ್ನೇ ನೆಪ ಮಾಡಿ 'ದಣಿಯೆ ದಣಿಸುವ'ನೆಂದೂ ಟೀಕಿಸಿರುವರು. ಇಲ್ಲಿ ಗೋಪಾಲದಾಸರು ಸಲಿಗೆಯಿಂದ ಶ್ರೀಹರಿಯ ಗುಣಾತಿಶಯಗಳನ್ನು ವಿಡಂಬಿಸಿರುವರು. ಹಾಗೆಯೇ ಅವನ ಸ್ವಾಮಿತ್ವವನ್ನು ಪ್ರಶ್ನಿಸಿ ತಮ್ಮ ಆಳುತನದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿರುವರು.

ಸಿರಿ, ಅಜಾದಿಗಳ ಅತ್ಯುತ್ತಮ ಜೀವನವನ್ನು ಹರಿಗೆ ತೋರಿಸಿ ಅವರನ್ನೆಲ್ಲ ಸೃಷ್ಟಿಸಿದ ನೀನೆ ನನ್ನನ್ನೂ ಸೃಷ್ಟಿಸಿದ್ದೀಯೆ. ಆದರೂ ನನಗೆ ಅಂತಹ ಪದವಿಗಳಿಲ್ಲ ಎಂದು ಹೇಳುತ್ತಾ ಗೋಪಾಲದಾಸರು,

ನಿನ್ನ ಸತಿಯಳಾದ ಸಿರಿಯ ಪದವಿಯ
ನೋಡೋ
ನಿನ್ನ ಮಗನಾದ ಅಜನ ಪದವಿಯ
ನೋಡೋ
ನಿನ್ನ ಮೊಮ್ಮಗನಾದ ಹರನ ಪದವಿಯ
ನೋಡೋ
ನಿನ್ನ ಸೇವಕರೊಳು ಇಂದ್ರನ ಭಾಗ್ಯವ
ನೋಡೋ
ನಿನ್ನ ಮಗಳು ಭಾಗೀರಥಿಯ ಭಾಗ್ಯವ
ನೋಡೋ
ನಿನ್ನ ಭಕ್ತರಾದ ಗಂಧವಾರ ಭಾಗ್ಯವ
ನೋಡೋ
ನಿನ್ನಿಂದವರನೆಲ್ಲ ಸೃಷ್ಟಿಸಲ್‌ಪಟ್ಟಿತು
ಎನ್ನನು ನೀನೆ ಸೃಷ್ಟಿಯ ಮಾಡಲಿಲ್ಲೆ
ತನ್ನ ಮಕ್ಕಳು ತಾಯಿ ಅನಂತವಿದ್ದರನ್ನು
ಮನ್ನಿಸಿ ಒಬ್ಬರನು ಮನ್ನಿಸದಿಪ್ಪೋಳೆ

ಅವರೆಲ್ಲ ನಿನಗೇನು ಕೊಟ್ಟರು ನಾನು ಕೊಡದಿರುವುದೇನು ? ಎಂದು ತರಾಟೆಗೆ ತೆಗೆದುಕೊಂಡಿರುವರು.

ಹೀಗೆ! ಹರಿದಾಸ ಸಾಹಿತ್ಯದಲ್ಲಿ ಶ್ರೀಹರಿಯನ್ನು ನಿಂದಿಸುವ ನೆಪದಲ್ಲಿ ವ್ಯಂಗ್ಯವಾಗಿ ಕೊಂಡಾಡಿರುವರು. ಶ್ರೀಹರಿಯ ಮೇಲಿರುವ ವಿಶೇಷ ಭಕ್ತಿಯಿಂದಲೇ ದಾಸರೆಲ್ಲರೂ ಬಿರುನುಡಿಯ ಸೋಗುಳ್ಳ ನುಡಿಗಳಿಂದ ನಿಂದಾರೂಪದ ಸ್ತೋತ್ರಗಳನ್ನು ಹಾಡಿರುವರು. ಈ ನಿಂದಾಸ್ತುತಿಗಳ ಹಿಂದೆ ಗುಪ್ತಗಾಮಿನಿಯಾಗಿರುವ ಭಗವದ್ಭಕ್ತಿ ಅವಿರತವಾಗಿರುವುದು ಒಂದು ವೈಶಿಷ್ಟ್ಯವಾಗಿದೆ. ನಿಂದಾಸ್ತುತಿಗಳಿಗಾಗಿ ದಾಸರು ಬಳಸಿಕೊಂಡಿರುವ ಪೌರಾಣಿಕ ಸನ್ನಿವೇಶಗಳ ಸಂಗ್ರಹದಿಂದ ಪುಟ್ಟ ಭಾಗವತದ ಲೋಕವೇ ಕಣ್ಣಮುಂದೆ ತೆರೆದುಕೊಳ್ಳುವಂತಾಗುವುದು ಇಲ್ಲಿನ ಮತ್ತೊಂದು ವೈಶಿಷ್ಟ್ಯವಾಗಿದೆ. ಪುರಾಣಗಳಲ್ಲಿ ಉಕ್ತವಾಗಿರುವ ಅನೇಕ ಕಥೆಗಳ ಸಾರ ಒಂದೊಂದೇ ಸಾಲಿನಲ್ಲಿ ಮಾರ್ಮಿಕವಾಗಿ ಜೋಡಣೆಯಾಗಿರುವುದು. ಎಂತಹವರನ್ನಾದರೂ ನಿಂದಾಸ್ತುತಿಗಳಲ್ಲಿ ಭಕ್ತಚೇತನಗಳ ಪ್ರಾರ್ಥನೆ, ಆನಂದ, ಶ್ರದ್ಧೆ ಸ್ಪಷ್ಟವಾಗಿ ಅಭಿವ್ಯಕ್ತವಾಗಿದೆ.

★

# ವಾರ್ತಾಲಹರಿ

## ತಿರುಮಲೆಗೆ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಡಾ|| ನೀಲಂ ಸಂಜೀವರೆಡ್ಡಿ ಅವರು ತಮ್ಮ ಕುಟುಂಬ ದೊಡನೆ ಜುಲೈ 23ರಂದು ತಿರುಮಲೆಗೆ ಆಗ ಮಿಸಿ ಶ್ರೀ ವೆಂಕಟೇಶ್ವರಸ್ವಾಮಿಯವರ ದರ್ಶನವನ್ನು ಪಡೆದು ಆನಂದಿತರಾದರು. ಆಲಯ ಮರ್ಯಾದೆಗಳೊಡನೆ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟೇಶ್ವರುಲು ಮತ್ತಿತರರಿಂದ ಸ್ವಾಗತಿಸಲ್ಪಟ್ಟ ರಾಷ್ಟ್ರಪತಿಯರು ಗುರು ವಾರ ರಾತ್ರಿ ಪೂಲಂಗಿ ಸೇವೆಯನ್ನು ಶುಕ್ರ ವಾರ ಬೆಳಗ್ಗೆ ಸುಪ್ರಭಾತ, ಅಭಿಷೇಕಗ ಳನ್ನು ವೀಕ್ಷಿಸಿದರು. ದೇವಸ್ಥಾನದ ಒಂದು ವರ್ಷದ ಅಭಿವೃದ್ಧಿಯನ್ನು ಗಮನಿಸಿ ಹರ್ಷ ವ್ಯಕ್ತಪಡಿಸಿದ ಅವರು ತಮ್ಮ ಆಗಮ ನದ ನೆನಪಿಗಾಗಿ ಹೊಸ ಗಿಡವೊಂದನ್ನು ತಿರುಮಲೆಯ ಉಪವನದಲ್ಲಿ ನೆಟ್ಟರು. ರಾಷ್ಟ್ರಪತಿಯವರು ತಮ್ಮ ಕುಟುಂಬದೊ ಡನೆ ತಿರುಚಾನೂರಿಗೆ ಆಗಮಿಸಿ ಅಂದಿನ ಶ್ರೀ ಪದ್ಮಾವತೀ ಅಮ್ಮನವರ ಕೋಟಿ ಕುಂಕುಮಾರ್ಚನೆಯಲ್ಲಿ ಭಾಗವಹಿಸಿದರು.

## ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ

ಎಂದಿನಂತೆ ತಿರುಮಲೆಯ ಶ್ರೀ ವೆಂಕ ಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು ಈ ಬಾರಿ 29-9-81 ರಿಂದ 8-10-81 ರವರೆಗೆ ತಿರುಮಲೆಯಲ್ಲಿ ವಿಶೇಷ ಸಂಭ್ರಮದಿಂದ ನಡೆಯುತ್ತವೆ. ಆ ದಿನಗಳಲ್ಲಿ ದಿನವೂ ಉತ್ಸವ ಕಾರ್ಯಕ್ರಮಗಳೇ ಅಲ್ಲದೆ ವಿಶೇಷ ಉಪನ್ಯಾಸ, ಸಂಗೀತ ಸಭೆಗಳನ್ನೂ ಸಹ ಏರ್ಪಡಿಸಲಾಗಿದೆಯೆಂದು ವರದಿಗಳು ತಿಳಿ ಸುತ್ತವೆ.



ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ರಾಷ್ಟ್ರಪತಿ.

## ಪದ್ಮಾವತೀ ಅಮ್ಮನವರ ನವರಾತ್ರಿ ಉತ್ಸವಗಳು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮ ನವರ ದೇವಾಲಯದಲ್ಲಿ ನವರಾತ್ರಿ ಉತ್ಸವಗಳು ಈ ಸಾಲಿನಲ್ಲಿ 29-9-81 ರಿಂದ 8-9-81 ರ ವರೆಗೆ ಬೆಂಗಳೂರಿನ ಓ. ಜಿ. ರಾಜುಲು ಅವರ ಪರವಾಗಿ ನಡೆಯುವು ದೆಂದು ವರದಿಯಾಗಿದೆ. ಅಂದಿನ ದಿನಗಳಲ್ಲಿ ದಿನವೂ ಸಂಜೆ 6-30 ರಿಂದ 7 ರ ವರೆಗೆ ಶ್ರೀ ಕೃಷ್ಣಸ್ವಾಮಿ ದೇವಾಲಯವಾದ ಮುಖ ಮಂಟಪದಲ್ಲಿ ಊಂಜಲ್ ಸೇವೆಯನ್ನು ಏರ್ಪಡಿಸಲಾಗುವುದು.



ತಿರುಮಲೆಯ ಉದ್ಯಾನವನದಲ್ಲಿ ಗಿಡ ನೆಡುತ್ತಿರುವ ರಾಷ್ಟ್ರಪತಿ.

## ವರದೇಂದ್ರಸ್ವಾಮಿಗಳ ಆರಾಧನೆ

ಈ ಬಾರಿಯ ವರದೇಂದ್ರಸ್ವಾಮಿಗಳ ಆರಾಧನೆ ದಿನಾಂಕ 6—7—81 ರಿಂದ 8-7-81 ರ ವರೆಗೆ ಮೂರು ದಿನಗಳ ಕಾಲ ಲಿಂಗಸೂಗೂರಿನ ವರದೇಂದ್ರ ವೃಂದಾವನ ಸಮಿತಿಯವರಿಂದ ಬಹು ಜನಪ್ರಿಯವಾಗುವಂತೆ ನಡೆಯಿತು, ತದಂಗವಾಗಿ ತಿ.ತಿ-ದೇ ದಾಸಸಾಹಿತ್ಯ ಪ್ರಾಜೆಕ್ಟ್ ಸಹ ಭಾಗವಹಿಸಿತ್ತು.

6—7—81 ರಂದು ಬೆಳಗ್ಗೆ ಶ್ರೀಕೆಪ್ಪರ ವೆಂಕಟನರಸಿಂಹಾಚಾರ್ಯರ ಭಾಗವತ ಸಾರ, ಖೇಢ ಕೃಷ್ಣಾಚಾರ್ಯರ ಭಾಗವತ ಪುರಾಣ ಉಪನ್ಯಾಸಗಳೊಂದಿಗೆ ಅಭಿನವ ಸುಳಾದಿ ಮಂಟಪವನ್ನು ಉದ್ಘಾಟನೆ ಮಾಡಲಾಯಿತು. ಅಂದು ಸಂಜೆ ದಾಸ ಸಾಹಿತ್ಯ ಪ್ರಾಜೆಕ್ಟ್‌ನ ಶ್ರೀ ಕೆ. ಅಪ್ಪಣ್ಣಾಚಾರ್ಯರ ಅಧ್ಯಕ್ಷತೆಯಲ್ಲಿ ಶ್ರೀ ಪ್ರಹ್ಲಾಚಾರ್ಯ ಜೋಷಿ ದಂಪತಿಗಳಿಗೂ ಮಂಟಪದ ತಾಂತ್ರಿಕ ಸಲಹೆಗಾರರಿಗೂ ಸನ್ಮಾನ ಮಾಡಲಾಯಿತು. ಈ ಸಂದರ್ಭದಲ್ಲಿ ತಿ. ತಿ. ದೇವಸ್ಥಾನಗಳ ಪರವಾಗಿ ನಾಲ್ಕು ಪುಟಗಳ ಕಿರು ಕರಪತ್ರವನ್ನು ಸಭೆಯಲ್ಲಿ ಹಂಚಲಾಯಿತು.

7—7—81 ರಂದು ಶ್ರೀ ಕೆ. ಅಪ್ಪಣ್ಣಾಚಾರ್ಯರಿಂದ ವರದೇಂದ್ರ ಸ್ತೋತ್ರ ವಿವರಣ, ಖೇಢ ಕೃಷ್ಣಾಚಾರ್ಯರಿಂದ ಕೃಷ್ಣ ಕಥೆ ನಡೆದು 8—7—81 ಪೂರ್ಣವಾಯಿತು. ಈ ದಿನ ನಡೆದ ರಥೋತ್ಸವ ಹೆಚ್ಚು ಜನರನ್ನು ಆಕರ್ಷಿಸಿತೆಂದು ಹೇಳಬಹುದು.

ಪ್ರತಿ ದಿನವೂ ಸಂಜೆ ಮಕ್ಕಳಿಂದ ಬುರ್ರ ಕಥೆ, ನಾಟಕಗಳು ನಡೆದು ಕೊನೆಯದಿನ ದೇವರನಾಮ, ಆಶುಭಾಷಣ. ರಂಗವಲ್ಲಿ ಸ್ಪರ್ಧೆಗಳಲ್ಲಿ ವಿಜೇತರಿಗೆ ಬಹುಮಾನ ಹಂಚಲಾಯಿತು.

ವರದಿ : ಸಿ. ರಾಮಾಚಾರ್ಯ.

## ಅಮೆರಿಕಾದಲ್ಲಿ 'ಶಿವ' ಪ್ರದರ್ಶನ

ಅಮೇರಿಕಾದ ಫಿಲಿಡೆಲ್ಫಿಯಾದಲ್ಲಿ 'ಶಿವ ಪ್ರಕಟನೆ' ಪ್ರದರ್ಶನವು ಯಶಸ್ವಿಯಾಗಿ ನಡೆಯುತ್ತಿದೆಯೆಂದು ವರದಿಗಳು ತಿಳಿಸುತ್ತಿವೆ. ಫಿಲಿಡೆಲ್ಫಿಯಾ ವಸ್ತು ಸಂಗ್ರಹಾಲಯದ 85 ವರ್ಷ ವಯಸ್ಸಿನ ವೃದ್ಧ ಕ್ಯೂರೇಟರ್ ಡಾ|| ಸ್ಟೆಲ್ಲಾ ಕ್ರಾಮರಿಚ್ ಅವರ ಹತ್ತು ವರ್ಷಗಳ ಯೋಜನಾಬದ್ಧ ಅಧ್ಯಯನ, ಪ್ರಯತ್ನಗಳ ಫಲವೇ ಈ ಪ್ರದರ್ಶನವೆಂದು ಹೇಳಲಾಗಿದೆ. ಕಲ್ಕತ್ತೆಯಲ್ಲಿ 27 ವರ್ಷಗಳ ಕಾಲ ವಿಶ್ವವಿದ್ಯಾನಿಲಯದ ಕಲಾವಿಭಾಗದ ಪ್ರೊಫೆಸರ್ ಆಗಿ ಕೆಲಸ ಮಾಡಿದ ಈ ಮಹಿಳೆ 'ದಿ ಪ್ರಸೆನ್ಸ್ ಆಫ್ ಶಿವ' ಪುಸ್ತಕವನ್ನು ಬರೆದಿದ್ದಾರೆ.

2000 ವರ್ಷಗಳ ದೀರ್ಘ ಇತಿಹಾಸದ ಶಿವ ಕಲಾ ಸಂಪತ್ತು ಇಡೀ ಏಷ್ಯಾಖಂಡದ ವಿವಿಧ ಭಾಗಗಳಿಂದ ಆಯ್ದು ತರಿಸಿದ, ಚಿತ್ರ, ಶಿಲ್ಪ ರೂಪದಲ್ಲಿ ಈ ಪ್ರದರ್ಶನದಲ್ಲಿ ಪ್ರದರ್ಶಿಸಲ್ಪಟ್ಟಿದೆ. ಮೊದಲಿಗೆ 17, 18, 19 ನೇ ಶತಕದ ಚಿತ್ರಗಳೂ, ನಂತರ ಏಕಮುಖಲಿಂಗದಿಂದ ಪಂಚಮುಖ ಲಿಂಗದವರೆಗೆ ಶಿವಲಿಂಗದ ವಿವಿಧ ರೂಪಗಳೂ, ನಂತರ ಅರ್ಧನಾರೀಶ್ವರ, ಹರಿಹರ, ನಾಟ್ಯಶಿವ, ಯೋಗಿಶಿವ ಮೊದಲಾದ ವಿವಿಧ ಶಿಲ್ಪಗಳು, ವಿವಿಧ ಲೋಹ, ಮರಗಳಿಂದ ವಿವಿಧ ರೀತಿಯಲ್ಲಿ ಕಾಲಗಳಲ್ಲಿ ಉಂಟಾದುವನ್ನೆಲ್ಲವನ್ನೂ ಪ್ರೇಕ್ಷಕರು ಮೂಕ ವಿಸ್ಮಿತರಾಗಿ ನೋಡಿ, ಸಂಬಂಧಿಸಿದ ಕಥೆಗಳ ವಿವರಗಳನ್ನೋದಿ ಆನಂದತುಂದಿಲರಾಗುತ್ತಿದ್ದುದು ಸಾಮಾನ್ಯ ದೃಶ್ಯವಾಗಿದ್ದಿತು.

ಫಿಲಿಡೆಲ್ಫಿಯಾ ವಸ್ತು ಸಂಗ್ರಹಾಲಯಕ್ಕೆ ಶಿವನನ್ನು ನೋಡಲು ಜನ ಬರುವವರೆಗೆ ಕಾಯುವ ಉದ್ದೇಶವಿಲ್ಲ. ಶಿವನನ್ನೇ ಜನದ ಬಳಿ ಕೊಂಡೊಯ್ಯುವ ಪ್ರಯತ್ನಗಳಲ್ಲಿ ಇತರ ಸಂಸ್ಥೆಗಳ ನೆರವನ್ನೂ ಪಡೆಯುತ್ತಿದೆ. ಅದರ ಉದ್ದೇಶ ಭಾರತೀಯ ಭೂಗೋಳ, ಇತಿಹಾಸ, ಸಂಸ್ಕೃತಿ, ಧರ್ಮ, ಸಾಹಿತ್ಯಗಳನ್ನು ಅಮೆರಿಕನ್ನರಿಗೆ ಪರಿಚಯಿಸುವುದಾಗಿದೆ. ಹಾಗಾಗಿ ಭಾರತೀಯ ಸಾಂಸ್ಕೃತಿಕ ಸಂಜೆಗಳನ್ನು, ಮಕ್ಕಳಿಗಾಗಿ ಭಾರತೀಯ ಸಾಂಸ್ಕೃತಿಕ ಕಾರ್ಯಾಗಾರಗಳನ್ನೂ ಏರ್ಪಡಿಸುತ್ತಿದೆ. ಇಂತಹ ಒಂದು ಸಾಂಸ್ಕೃತಿಕ ಸಂಜೆ 'ಭಾರತ ದಿನ'ವು 20,000 ಕ್ಕೂ ಮಿಕ್ಕಂತೆ ಜನವನ್ನೂ ಆಕರ್ಷಿಸಿತು. 'ಶಿವ' ಪ್ರದರ್ಶನಕ್ಕೆ ಬಂದವರ ಸಂಖ್ಯೆ 80,000 ಗಡಿ ದಾಟಿದೆ.

ಈ ಪ್ರದರ್ಶನವು ಒಂದು ವರ್ಷಕಾಲ ಅಮೆರಿಕಾದಲ್ಲಿ ಸಂಚರಿಸಲು ಏರ್ಪಡಿಸಲಾಗಿದೆ. ಮುಂದಿನ ಪ್ರದರ್ಶನದ ಸ್ಥಳಗಳೆಂದರೆ ಫೋರ್ಟ್‌ವರ್ತ್, ಟೆಕ್ಸಾಸ್, ವಾಷಿಂಗ್‌ಟನ್, ಲಾಸ್‌ಏಂಜಲ್ಸ್‌ಗಳು.

ಆಧಾರ : ಲೀ ಶೆರಿಡಿನ್
ಇಂಡಿಯಾ ಟುಡೇ.



ವರದೇಂದ್ರ ಆರಾಧನೆಯಲ್ಲಿ ಭಾಷಣ ಮಾಡುತ್ತ ತಿ. ತಿ. ದೇ. ದಾಸಸಾಹಿತ್ಯಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯ,

# ನಿಮ್ಮ ಭವಿಷ್ಯ

ಡಾ॥ ಆರ್ಕಸೋಮಯಾಜಿ.



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ಧನ, ಯಶೋಲಾಭಗಳು ಸೂಚಿತವಾಗಿವೆ. ಜ್ವರ ಅಥವಾ ಹೊಟ್ಟೆ ನೋವು. ದುಷ್ಟ ಸಹವಾಸ. 20 ರ ನಂತರ ವಿವಾದಗಳು. 17 ರ ನಂತರ ಆರೋಗ್ಯ. ಆತ್ಮೀಯರೊಂದಿಗೆ ಬೇರ್ಪಡೆ ಹಾಗೂ ಸ್ನೇಹಿತರಿಂದ ದೂರಾಗುವಿಕೆಯಿಂದಾಗಿ ಚಿತ್ತಶಾಂತಿನಾಶ. ಸ್ತ್ರೀಯರು ತೊಂದರೆಯುಂಟಾಗಿಸಬಹುದು. ಒಟ್ಟಿನಲ್ಲಿ ಈ ರಾಶಿಯವರು ಧನ ಯಶಗಳಿಂದಾಗಿ ಉತ್ಸಾಹದಿಂದಿರುವರು.

ಅಶ್ವಿನಿಯವರಿಗೆ 1, 3, 11, 13, 18, 21, 28,

ಭರಣಿಯವರಿಗೆ 2, 4, 12, 17, 19, 20, 22,

ಕೃತ್ತಿಕೆ, ಮೊದಲ ಪಾದದವರಿಗೆ 1, 3, 11, 13, 17, 20, 21, 28,

ಒಳಿತಿನ ದಿನಗಳು.



## ವೃಷಭ :

(ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ಧನಲಾಭ. (ಪ್ರಾಯಶಃ ದುರ್ಮಾರ್ಗದಲ್ಲಿ) ಮಕ್ಕಳಿಂದಾಗಿ ತುಸು ಆಂದೋಳನ. 20 ರ ವರೆಗೆ ಹೆಂಡತಿ, ಪುತ್ರರೊಂದಿಗೆ ವಿವಾದ. ನಂತರ ಪ್ರಯತ್ನ ಸಾಫಲ್ಯ. ಮೊದಲವಾರದಲ್ಲಿ ಬಂಧುಗಳ ಆಗಮನ. ಹಿರಿಯರ ಪ್ರಶಂಸೆ. ಒಟ್ಟಿನಲ್ಲಿ ವಿಶೇಷ ಘಟನೆಗಳಿಲ್ಲದೆ ನಡೆಯುವ ತಿಂಗಳು.

ಕೃತ್ತಿಕೆ 2, 3, 4 ಪಾದದವರಿಗೆ 3, 6, 13, 15, 20, 23, 28, 30,

ರೋಹಿಣಿಯವರಿಗೆ 4, 12, 14, 16, 22, 30,

ಮೃಗಶಿರ 1, 2, ಪಾದದವರಿಗೆ 3, 5, 13, 15, 19, 23, 30

ಒಳಿತಿನ ದಿನಗಳು.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಒಳ್ಳೆಯ ಸ್ನೇಹಿತರು. ಬಂಧುಗಳ ಆಗಮನ. ಹಿರಿಯರ ಪ್ರಶಂಸೆ. ಆದರೆ ಅಧಿಕೃತವಾದ ಚಿಂತೆ. ಧನ ವ್ಯಯ ಅಥವಾ ನಷ್ಟ ಸೂಚಿತವಾಗಿದೆ. ಆಪ್ತರಿಂದ ದೂರವಾಗುವ ಸಂಭವವಿದೆ. ಒಟ್ಟಿನಲ್ಲಿ ಈ ತಿಂಗಳು ಪ್ರೋತ್ಸಾಹದಾಯಕವಲ್ಲ.

ಮೃಗಶಿರ 3, 4, ಪಾದದವರಿಗೆ 5, 8, 15, 17, 27,

ಆರ್ದ್ರಾ ನಕ್ಷತ್ರದವರಿಗೆ 9, 16, 22, 26,

ಪುನರ್ವಸು 1, 2, 3 ಪಾದದವರಿಗೆ 5, 8, 15, 17, 21, 25,

ಒಳಿತಿನ ದಿನಗಳು.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ಸ್ನೇಹಲಾಭವಾದರೂ 20 ರ ವರೆಗೆ ಅಧಾರ್ಮಿಕ ಪ್ರವರ್ತನೆ. ಧನ, ವಸ್ತ್ರಲಾಭ. 17 ರ ವರೆಗೆ ವಂಚಿತರಾಗುವ ಹಾಗೂ ನೇತ್ರ ಬಾಧೆಯು ಸಂಭವವಿದೆ. 17 ರ ನಂತರ ಒಳಿತಿನಕಾಲ.

ಪುನರ್ವಸು 4ನೇ ಪಾದದವರಿಗೆ 2, 8, 10, 17, 27,

ಪುಷ್ಯಮಿಯವರಿಗೆ 1, 9, 11, 19, 20, 28,

ಆಶ್ಲೇಷದವರಿಗೆ 2, 8, 10, 17, 19, 20, 23, 27, 29

ಒಳಿತಿನ ದಿನಗಳು.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ)

ಆದಾಯವಿದ್ದರೂ ವೆಚ್ಚ ಹೆಚ್ಚು. 17 ರ ವರೆಗೆ ಪ್ರಯಾಣ ಅಥವಾ ಹೊಟ್ಟೆನೋವು ಸೂಚಿತ. ದುಷ್ಟ ಪ್ರವರ್ತನೆ ಸೂಚಿತ. ವಸ್ತ್ರಲಾಭ. ಗೌರವದೊಂದಿಗೆ ಅಪಮಾನವೂ ಸಂಭವ; ಹೊಸಸ್ನೇಹಿತರು. ಒಟ್ಟಿನಲ್ಲಿ ಈ ತಿಂಗಳು ಪ್ರೋತ್ಸಾಹದಾಯಕವಲ್ಲ.

ಮಖ ನಕ್ಷತ್ರದವರಿಗೆ 3, 11, 13, 20, 21, 26,

ಪುಬ್ಬಾ ನಕ್ಷತ್ರದವರಿಗೆ 2, 4, 12, 20, 22, 25,

ಉತ್ತರಾ 1ನೇ ಪಾದದವರಿಗೆ 5, 8, 11, 13, 19, 20, 21, 26,

ಒಳಿತಿನ ದಿನಗಳು.



## ಕನ್ಯಾ :

(ಉತ್ತರ 2,3,4, ಪಾದ, ಹಸ್ತ, ಚಿತ್ತ 1,2 ಪಾದ)

ಧನಲಾಭವಿದ್ದರೂ ಅನಗತ್ಯವೆಚ್ಚ. ಪ್ರಯಾಣ ಅಥವಾ ಆಪ್ತರಿಂದ ಬೇರ್ಪಡೆ. ಏನೇ ಆದರೂ ಉತ್ಸಾಹಪೂರ್ಣತೆ. ಮೊದಲವಾರದ ನಂತರ ಒಳಿತು. 17 ರ ನಂತರ ಹೆಚ್ಚು ಪ್ರಯಾಣ ಅಥವಾ ಹೊಟ್ಟೆನೋವು.

ಉತ್ತರಾ 2, 3, 4 ಪಾದಗಳವರಿಗೆ 1, 5, 6, 13, 15, 21, 23, 28,

ಹಸ್ತ ನಕ್ಷತ್ರದವರಿಗೆ 2, 6, 12, 16, 20, 22, 29,

ಚಿತ್ತಾ 1, 2, ಪಾದದವರಿಗೆ 1, 5, 13, 15, 21, 23, 28

ಒಳಿತಿನ ದಿನಗಳು.



## ತುಲಾ :

(ಚಿತ್ತ 3,4ಪಾದ, ಸ್ವಾತಿ, ವಿಶಾಖಾ1,2,3 ಪಾದ)

ಆಗಾಗ ಪ್ರಯಾಣ. ವಿವಾದಗಳುಂಟಾಗುತ್ತವೆ. 17 ರ ವರೆಗೆ ಒಳಿತು. ಧನಲಾಭ. ಹೊಸ ಉಡುಪು, ಶೃಂಗಾರಭಾವ. ದುಷ್ಟ ಸಲಹೆಗಳ ಬಗ್ಗೆ ಧನಹಾನಿಯ ಬಗ್ಗೆ ಎಚ್ಚರ

ದಿಂದಿರುವುದು ಉತ್ತಮ. ಒಟ್ಟಿನಲ್ಲಿ ಸಾಧಾರಣ ತಿಂಗಳು.

ಚಿತ್ತಾ 3, 4 ಪಾದಗಳವರಿಗೆ 3, 8, 15, 17, 23, 27, 28, 30,

ಸ್ವಾತಿ ನಕ್ಷತ್ರದವರಿಗೆ 4, 9, 14, 16, 22, 26, 28,

ವಿಶಾಖಾ 1, 2, 3 ಪಾದದವರಿಗೆ 2, 8, 15, 17, 23, 25, 30

ಒಳಿತಿನ ದಿನಗಳು.



### ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಈ ರಾಶಿಯವರಿಗಿದು ಬಹು ಉತ್ತಮ ಕಾಲ. 10 ರ ವರೆಗೆ ಧನಲಾಭ, ಸ್ನೇಹ, ಶೃಂಗಾರಭಾವ. ನಂತರ ತುಸುವಿವಾದ. ಆಧಾರ್ಮಿಕ ಹಾಗೂ ಪಾಪ ಪ್ರವರ್ತನೆ ಸೂಚಿತ. ಯಶಸ್ಸು ಈ ತಿಂಗಳಿನಲ್ಲಿ ಗಮನಾರ್ಹವಾಗಿರುತ್ತದೆ.

ವಿಶಾಖಾ 4 ನೇ ಪಾದದವರಿಗೆ 2, 5, 16, 17, 20, 23, 25, 27, 29,

ಅನುರಾಧ ನಕ್ಷತ್ರದವರಿಗೆ 1, 11, 16, 19, 26, 28,

ಜ್ಯೇಷ್ಠಾ ನಕ್ಷತ್ರದವರಿಗೆ 2, 5, 17, 20, 25, 27

ಒಳಿತಿನ ದಿನಗಳು.



### ಧನುಸ್ಸು :

(ಮೂಲ, ಪೂ. ಉ. 1 ನೇ ಪಾದ)

ಧನಲಾಭವಿದ್ದರೂ ಅಧಿಕ ವೆಚ್ಚ. ವಿವಾದ ಅಪಮಾನಗಳು ಸೂಚಿತ. 7 ರ ನಂತರ ಸುಸ್ನೇಹ, ದೇಹಘಾತ. ಏನೇ ಆದರೂ ಈ ತಿಂಗಳು ಪ್ರೋತ್ಸಾಹದಾಯಕವಲ್ಲ.

1, 3, 9, 13, 19, 20, 21, 28,

ಒಳಿತಿನ ದಿನಗಳು.



### ಮಕರ :

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಧನಲಾಭ ಅಧಾರ್ಮಿಕ ಪ್ರವರ್ತನೆ. ಹೆಂಡತಿಯೊಡನೆ ವಿವಾದ ಅಥವಾ ಕಣ್ಣು ಅಥವಾ ಹೊಟ್ಟೆನೋವು. 20 ರ ನಂತರ ಒಳಿತು. ಮನೆಯ ಹೊರಗಣ ವಿವಾದಗಳೂ ಸಂಭವ.

ಉತ್ತರಾಷಾಢ 2, 3, 4, 5 ಪಾದಗಳವರಿಗೆ 3, 5, 11, 15, 21, 23,

ಶ್ರವಣ ನಕ್ಷತ್ರದವರಿಗೆ 4, 10, 16, 20, 22, 29,

ಧನಿಷ್ಠಾ 1, 2, ಪಾದದವರಿಗೆ 3, 5, 11, 15, 23, 28

ಒಳಿತಿನ ದಿನಗಳು



### ಕುಂಭ :

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ಪ್ರಯಾಣ ಅಥವಾ ಆಪ್ತರಿಂದ ಬೇರ್ಪಡೆ, ಧನಲಾಭ, ಯಶೋಲಾಭ, ವಸ್ತ್ರಲಾಭ, ತೃಪ್ತಭಾವ. 7ರ ನಂತರ ಧಾರ್ಮಿಕ ಪ್ರವರ್ತನೆ. ತುಸು ಅನಾರೋಗ್ಯ ಅಥವಾ ಹೆಂಡತಿಯ ಅತೃಪ್ತಿ. ಒಟ್ಟಿನಲ್ಲಿ ಈ ತಿಂಗಳು ಸುಖದಾಯಕ.

ಧನಿಷ್ಠಾ 3, 4 ಪಾದದವರಿಗೆ: 5, 8, 13, 17, 23, 27,

ಶತಭಿಷಾ ನಕ್ಷತ್ರದವರಿಗೆ: 9, 14, 16, 22, 26

ಪೂರ್ವಾಭಾದ್ರ 1, 2, 3, ಪಾದದವರಿಗೆ 5, 8, 13, 17, 23, 25

ಒಳಿತಿನ ದಿನಗಳು.



### ಮೀನ :

(ಪೂ. ಭಾ. 4 ನೇ ಪಾದ ಉ. ಭಾ. ರೇವತಿ)

ಪ್ರಯಾಣ ಹಾಗೂ ಶೃಂಗಾರ ಭಾವಗಳು ಸೂಚಿತ. 20ರವರೆಗೆ ವಿವಾದಗಳು. ಮೊದಲವಾರದಲ್ಲಿ ಸ್ತ್ರೀಯರ ಮೂಲಕ ತೊಂದರೆ ನಂತರ ಧನಲಾಭ, ವಸ್ತ್ರಲಾಭ. ಮಕ್ಕಳಮೂಲಕ ತುಸು ಚಿಂತೆ. 17ರ ಮೊದಲು ಯಶ.

ಪೂರ್ವಾಭಾದ್ರ 4ನೇಪಾದ 2, 10, 12 15, 20, 25, 27, 29

ಉತ್ತರಾಭಾದ್ರ ನಕ್ಷತ್ರದವರಿಗೆ 1, 11, 19,23, 26, 28,

ರೇವತಿ ನಕ್ಷತ್ರದವರಿಗೆ 2, 10, 12, 15, 20, 25, 27, 29,

ಒಳಿತಿನ ದಿನಗಳು.

---




Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

ವಿಶೇಷ ಪ್ರವೇಶ ರೂ 25–00
(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ)

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ1 | ರೂ 200 |
| 2. | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5. | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 2500 |
| 8. | ತಿರುಪ್ಪಾವಡಾ | ರೂ 5000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 1745 |
| 10 | ಮುಕುರ ಮಂಟಪದಲ್ಲಿ ಡೋಲೋತ್ಸವ2 | ರೂ 1500 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 2500 |
| ಕಲ್ಯಾಣೋತ್ಸವ | ರೂ 1500 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ2 | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1 ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.
* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.
2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ : **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ
ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ. ಒಳಗಿನ ಕಾಟೇಜುಗುಳು | ,, | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೇಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 15–00 |
| ಶೇಷಾದ್ರಿನಗರ ,, | ,, | ರೂ 15–00 |
| ಅಂಜನಾದ್ರಿನಗರ ,, | ,, | ರೂ 15–00 |
| ಗರುಡಾದ್ರಿನಗರ ,, | ,, | ರೂ 15–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ | ಎರಡು ಹಾಸಿಗೆಗಳ ಕೋಣೆ | ರೂ 12–00 |
| | ನಾಲ್ಕು ,, | ರೂ 15–00 |
| | ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| | ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| | ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| | ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲ ತಿರುಪತಿ ದೇವಸ್ಥಾನ.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.
3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.
4. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ಕಾವೇರಿ! ಕಮನೀಯಾಂಗಂ ರಂಗನಾಥಂ ಸದಾ ಹೃದಿ
ಧತ್ಸೇ! ತ್ವತ್ಸೇವಯಾ ದೇವಿ! ಕೋನು ಕುರ್ಯಾನ್ನ ತಂ ಹೃದಿ.

ಕಾವೇರಿ; ಮನೋಹರವಾದ ಶರೀರವನ್ನು ಹೊಂದಿದ ರಂಗನಾಥನನ್ನು ನೀನು ಹೃದಯದಲ್ಲಿ ಧರಿಸಿರುವೆ. ನಿನ್ನನ್ನು ಸೇವಿಸಿದ ಯಾರು ತಾನೇ ತಮ್ಮ ಹೃದಯದಲ್ಲಿ ರಂಗನಾಥನನ್ನು ಧರಿಸುವುದಿಲ್ಲ!



# ತಿರುಮಲೆ ಶ್ರೀವೇಂಕಟೇಶ್ವರಸ್ವಾಮಿಯವರ

## ಬ್ರಹ್ಮೋತ್ಸವ ಪತ್ರಿಕೆ.

### ಉತ್ಸವ ಕಾರ್ಯಕ್ರಮ

**29—9—81** ರಿಂದ **8—10—81** ವರೆಗೆ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 29–9–81 | ಮಂಗಳ | — | ಅಂಕುರಾರ್ಪಣೆ<br>ಶ್ರೀ ಸೇನಾಧಿಪತಿ ಉತ್ಸವ |
| 30–9–81 | ಬುಧ | ತಿರುಚ್ಚಿಉತ್ಸವ | ದೊಡ್ಡ ಶೇಷವಾಹನ |
| 1–10–81 | ಗುರು | ಚಿಕ್ಕ ಶೇಷವಾಹನ | ಹಂಸವಾಹನ |
| 2–10–81 | ಶುಕ್ರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 3–10–81 | ಶನಿ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 4–10–81 | ಭಾನು | ಪಲ್ಲಕಿಯಲ್ಲಿ ಮೋಹಿನೀ ಅವತಾರೋತ್ಸವ | ಮಕರಕಂಠಿ ಸಹಸ್ರನಾಮಾವಳಿ ಶ್ರೀಲಕ್ಷ್ಮೀಹಾರಾದ್ಯಾಭರಣ ನೂತನ ಮೇಲ್ಕಾತ್ತು ವಸ್ತ್ರಾಲಂಕಾರದೊಡನೆ ಗರುಡಸೇವೆ. |
| 5–10–81 | ಸೋಮ | ಬೆಳಗ್ಗೆ : ಹನುಮದ್ವಾಹನ<br>ಸಂಜೆ: ವಸಂತೋತ್ಸವ | ಗಜವಾಹನ |
| 6–10–81 | ಮಂಗಳ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 7–10–81 | ಬುಧ | ರಥೋತ್ಸವ | ಅಶ್ವ ವಾಹನ |
| 8–10–81 | ಗುರು | ಪಲ್ಲಕ್ಕಿಉತ್ಸವ, ತಿರುಚ್ಚಿ ಉತ್ಸವ, ತೀರ್ಥವಾರಿ | ಧ್ವಜಾವರೋಹಣೋತ್ಸವ |

ವಿಶೇಷ :– 1- ಪ್ರತಿದಿನವೂ ರಾತ್ರಿ ಉತ್ಸವದ ಮುಂಚೆ ಉಯ್ಯಾಲ ಉತ್ಸವವು ರಾತ್ರಿ 7–00 ಗಂ॥ಯಿಂದ 8–00 ಗಂ॥ವರೆಗೆ ನಡೆಯುವುದು. 2. ಪ್ರತಿ ದಿನವೂ ಸಾಯಂಕಾಲ ವಿದ್ವಾಂಸರು ಉಪನ್ಯಾಸಗಳನ್ನು ಮಾಡುವರು. 3. ಪ್ರತಿ ದಿನವೂ ನಡೆಯುವ ಕಾರ್ಯಕ್ರಮವು ಮುಂಚಿತವಾಗಿಯೇ ತಿಳಿಸಲ್ಪಡುವುದು.

ಬ್ರಹ್ಮೋತ್ಸವದಲ್ಲಿ ತಿರುಪತಿಯ ಹೊಸ ಸತ್ರದಿಂದ ಬೆಟ್ಟಕ್ಕೆ ಬೆಳಗ್ಗೆ 4–30 ಗಂಟೆಯಿಂದ ರಾತ್ರಿ 10–00 ಗಂಟೆಯವರೆಗೆ ಬಸ್ಸುಗಳು ಹೋಗುವುವು. ಬಸ್ ಟಿಕೆಟ್ಟು, ಒಬ್ಬರಿಗೆ ರೂ. 3—00

ಯಾತ್ರಿಕರು ದೇವಸ್ಥಾನಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ದೇವಸ್ಥಾನದ ವಿಚಾರಣಾ (Enquiry Office) ಕಚೇರಿಯಲ್ಲಿ ಕೇಳಿ ತಿಳಿದುಕೊಳ್ಳಬಹುದು.